# ಮಾನಸಿ

ವಿಶೇಷ ಸಂಚಿಕೆ

ತಿಂಗಳ ಪತ್ರಿಕೆ ಮಾರ್ಚ್ 1993

★ ಸ್ತ್ರೀ ವಾದದಿಂದ ಮಾನವ ಹಕ್ಕುಗಳೆಡೆಗೆ

★ ಕೋಮುವಾದ ಮತ್ತು ಮಹಿಳೆ

★ ಬದುಕೋಣ ನಿಶ್ಚಿಂತೆ

★ ಸ್ತ್ರೀವಾದಿ ಸಂವೇದನೆಗೆ ಅಭಿವ್ಯಕ್ತಿ

★ ನನ್ನ ಬದುಕು ತುಂಬಿಸಿಟ್ಟ ಬಂದೂಕಿನ ತರಹ

# ಮಾನಸ

ವಿಶೇಷ ಸಂಚಿಕೆ

ಸಂಪುಟ : ೧೩ ಸಂಚಿಕೆ : ೨

ಮಾರ್ಚ್ - ೧೯೯೩

**ಸಂಪಾದಕೀಯ ಮಂಡಳಿ :**

ರಾಜೇಶ್ವರಿ ಎಚ್. ಎಸ್.,
ಚಂಪಾವತಿ ಎಚ್. ಎಸ್., ಸರಸ್ವತಿ ದು.,
ಸವಿತ ಎ., ಗಾಯತ್ರಿ ವಿ.

**ಸಲಹೆ-ಸಹಕಾರ**

ಇಳಾ ವಿಜಯಾ

**ವಿಳಾಸ :**

**"ಮಾನಸ"** ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ ಪೋಸ್ಟ್
ಬೆಂಗಳೂರು–560 067

ಬಿಡಿ ಪ್ರತಿ : **3-00 ರೂ.**

ಸೂಚನೆ : ವಾರ್ಷಿಕ ಚಂದಾ : **25 ರೂ.**

ಆಜೀವ ಚಂದಾ : **300 ರೂ.**

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು.

ಹಣವನ್ನು ಬ್ಯಾಂಕ್ ಡ್ರಾಫ್ಟ್, ಎಂ.ಓ.
ಮೂಲಕ ಸ್ವೀಕರಿಸಲಾಗುವುದು.

**ಈ ಸಂಚಿಕೆಯಲ್ಲಿ...**

ಸಂಪಾದಕೀಯ

ಬಿತ್ತಿದಂತೆ ಬೆಳೆ (ಕವನ)
ವೆಂ. ವನಜ

ಸ್ತ್ರೀ ವಾದದಿಂದ ಮಾನವ ಹಕ್ಕುಗಳೆಡೆಗೆ
ನಂದಿತಾ ಹಕ್ಸರ್ ಸಂದರ್ಶನ
–ಗಾಯತ್ರಿ ವಿ.
–ಸರಸ್ವತಿ ದು.

ಬಿ. ಜಯಶ್ರೀಯವರ 'ಅಗ್ನಿಪಥ'
–ರಾಜೇಶ್ವರಿ ಎಚ್. ಎಸ್.

ಧರ್ಮ–ಕೋಮುವಾದ
ಕೋಮು ಸೌಹಾರ್ದತೆಗಳ
ಲಿಂಗಸ್ವರೂಪ
–ಗಾಯತ್ರಿ ವಿ.

ಬದುಕೋಣ ನಿಶ್ಚಿಂತೆ (ಕವನ)
–ಉತ್ತನೂರು ರಾಜಮ್ಮ ವಿ. ಶೆಟ್ಟಿ

ಸ್ತ್ರೀವಾದಿ ಸಂವೇದನೆಗೆ ಅಭಿವ್ಯಕ್ತಿ
–ಸಿ. ಜಿ. ಎಂ.

ನನ್ನ ಬದುಕು ನಿಂತಿದ್ದು
ತುಂಬಿಸಿಟ್ಟ ಬಂದೂಕಿನ ತರಹ
–ಚಂಪಾವತಿ ಎಚ್. ಎಸ್.

ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - ೫೬೦ ೦೬೭



# ಸಂಪಾದಕೀಯ

ರಾಯಚೂರು ತಾಲ್ಲೂಕು ಕುಷ್ಟಗಿಯಲ್ಲಿ ಅಂಗನವಾಡಿ ಕಾರ್ಯಕರ್ತೆಯಾಗಿ ಕೆಲಸಮಾಡುತ್ತಿದ್ದ ದಲಿತ ಮಹಿಳೆ ಶರಣವ್ವನ ಮೇಲೆ ಸಾಮೂಹಿಕ ಅತ್ಯಾಚಾರ ನಡೆಸಿ, ಅವಳ ಸಾವಿಗೆ ಕಾರಣವಾಗಿರುವುದು ನಮ್ಮಲ್ಲಿ ನಶಿಸಿ ಹೋಗುತ್ತಿರುವ ಮಾನವೀಯತೆಯ ಪ್ರತೀಕ. ಆರೋಪಿಗಳು ತಮ್ಮ ಅಧಿಕಾರವನ್ನು ದುರುಪಯೋಗ ಪಡಿಸಿಕೊಂಡು ಅಮಾಯಕ ಮಹಿಳೆಯನ್ನು ಬಲಿತೆಗೆದುಕೊಂಡಿರುವ ಈ ಕೃತ್ಯ ಬರ್ಬರ ಹಾಗೂ ಅಮಾನುಷವಾದುದು.

ಘಟನೆ ನಡೆದು ಸಾಕಷ್ಟು ದಿನಗಳಾಗಿದ್ದರೂ ಬೆಳಕಿಗೆ ಬಂದಿರುವುದು ನಿಧಾನವಾಗಿ. ಉನ್ನತ ಅಧಿಕಾರಿಗಳಿಗೆ, ಪ್ರಭಾವೀ ವ್ಯಕ್ತಿಗಳ, ಸ್ಥಳೀಯ ರಾಜಕಾರಣಿಗಳ ಕುಮ್ಮಕ್ಕು ಇರುವುದು ಇದಕ್ಕೆ ಮುಖ್ಯಕಾರಣ. ಈ ಪ್ರಭಾವದಿಂದಲೇ ಪ್ರಕರಣವನ್ನೇ ಸಂಪೂರ್ಣವಾಗಿ ತಿರುಚಿ ಬಿಡುವ ಪ್ರಯತ್ನವನ್ನು ಮಾಡಲಾಗುತ್ತಿದೆ. ಆರೋಪಿಗಳನ್ನು ಬಂಧಿಸುವಲ್ಲಿ ಪೋಲಿಸರು ತೋರಿದ ವಿಳಂಬ, ಶರಣಮ್ಮನಿಗೆ ಕ್ಯಾನ್ಸರ್ ಇತ್ತೆಂಬ ದಾಖಲೆಗಳನ್ನು ಉದ್ದೇಶ ಪೂರ್ವಕವಾಗಿ ಸೃಷ್ಟಿಸುತ್ತಿರುವುದು ಘಟನೆಯನ್ನು ಮುಚ್ಚಿಹಾಕಲು ಮಾಡುತ್ತಿರುವ ಯತ್ನಗಳು. ದೂರನ್ನು ದಾಖಲುಮಾಡಿದರೂ, ಕಾನೂನಿನಲ್ಲಿರುವ ಹಲವಾರು ಮಿತಿಗಳಿಂದ ಶರಣವ್ವನ ಸಮ್ಮತಿ ಇತ್ತೆಂದು ಅರೋಪಿಸಿದರೂ ಆಶ್ಚರ್ಯವೇನಿಲ್ಲ.

ಆರೋಪಿಗಳು ಉನ್ನತ ಅಧಿಕಾರಿಗಳಾಗಿರುವುದು ಅಪರಾಧದ ಘೋರತೆಯನ್ನು ಎತ್ತಿಹಿಡಿಯುತ್ತದೆ. ಕಾನೂನಿನ್ವಯ ಅಧಿಕಾರವನ್ನು ಉಪಯೋಗಿಸಿ ಎಸೆಗಿದ ಈ ಅಪರಾಧಕ್ಕೆ ಹೆಚ್ಚಿನ ಶಿಕ್ಷೆಯನ್ನು ಅನುಭವಿಸಬೇಕಾಗುತ್ತದೆ. ಸರ್ಕಾರ ಭರವಸೆಯನ್ನು ನೀಡಿದ್ದರೂ, ಆರೋಪಿಗಳನ್ನು ತಕ್ಷಣ ಬಂಧಿಸುವುದು, ಕಾನೂನಿನನ್ವಯ ಕ್ರಮ ತೆಗೆದುಕೊಳ್ಳುವಂತೆ ಒತ್ತಾಯಿಸಿ ಈ ಬರ್ಬರ ಕೃತ್ಯವನ್ನು ಪ್ರತಿಯೊಬ್ಬರೂ ಪ್ರತಿಭಟಿಸಬೇಕಾಗಿದ. ಕ್ಯಾನ್ಸರ್ ಇರುವುದು ಶರಣವ್ವಳಿಗೊ ಅಥವಾ ಸಮಾಜಕ್ಕೊ ಎನ್ನುವುದನ್ನು ಮಾನವೀಯತೆಯಿರುವ ಪ್ರತಿಯೊಬ್ಬರೂ ಪ್ರಶ್ನಿಸಿಕೊಳ್ಳಬೇಕಾಗಿದೆ.

# ಬಿತ್ತಿದಂತೆ ಬೆಳೆ

ತನ್ನ ಗಂಡು ಮಕ್ಕಳಿಗೆ ರೈತ ಓಡಲು ಕಲಿಸುತ್ತಿದ್ದ
ಚೈತನ್ಯವೇ ದೇಹವಾಗಿದ್ದ ಪುಟ್ಟ ಬಾಲೆಯೆಂದಳು
'ನನಗೂ ಕಲಿಸಪ್ಪ, ನನಗೂ ಕಲಿಸು'
ಪ್ರೀತಿಯಿಂದ ಆತನೆಂದ:
'ನನ್ನ ಪುಟ್ಟ ರಾಜಕುಮಾರಿ, ನೀ ಕಲಿಯಬೇಕಿಲ್ಲ'

ಗಂಡುಮಕ್ಕಳಿಗೆ ರೈತ ಈಜು ಕಲಿಸುತ್ತಿದ್ದ.
ದಡದ ಮೇಲೆ ಕುಪ್ಪಳಿಸುತ್ತಾ ಪುಟ್ಟ ಬಾಲೆಯೆಂದಳು
'ನನಗೂ ಕಲಿಸಪ್ಪ, ನನಗೂ ಕಲಿಸು'
ಪ್ರೀತಿಯಿಂದ ಆತನೆಂದ :
'ನನ್ನ ಪುಟ್ಟ ರಾಜಕುಮಾರಿ, ನಿನಗದರ ಅಗತ್ಯವಿಲ್ಲ'

ಗಂಡು ಮಕ್ಕಳನ್ನು ರೈತ ಶಾಲೆಗೆ ಕಳಿಸುತ್ತಿದ್ದ.
ಕೊಳಗಳಂತಾದ ಕಂಗಳ ಪುಟ್ಟಪೋರಿ ಎಂದಳು :
'ನನ್ನನ್ನೂ ಕಳಿಸಪ್ಪ, ನನ್ನನ್ನೂ ಕಳಿಸು'
ಪ್ರೀತಿಯಿಂದ ಆತನೆಂದ :
'ನನ್ನ ಪುಟ್ಟ ರಾಜಕುಮಾರಿ, ನೀ ಶಾಲೆಗೆ ಹೋಗಬೇಕಿಲ್ಲ'

ವರುಷಗಳು ಉರುಳಿದವು.
ಒಂದು ದಿನ ಮುಳುಗುತ್ತಿದ್ದ ರೈತ ಕೂಗಿಕೊಂಡ
'ನನ್ನನ್ನುಳಿಸು ಮಗಳೆ, ನನ್ನನ್ನುಳಿಸು'
'ನಾ ಈಜಲಾರೆ' ಅವಳು ಕಂಗೆಟ್ಟಳು.
ನೋಡುತ್ತಿದ್ದಂತೆ ಆತನ ಕೈಕಾಲು ಬಡಿತ ನಿಂತಿತು
ಅವಳು ಶೂನ್ಯವನ್ನು ದಿಟ್ಟಿಸುತ್ತಾ ನಿಶ್ಚಲಳಾಗಿ ನಿಂತಳು.
ಪ್ರಶ್ನೆಯೊಂದು ಕಾಡುತ್ತಿತ್ತು : 'ನನಗಿನ್ನಾರು ಗತಿ ?'

ನೆಂ. ವನಜ

(ಪ್ರೇರಣೆ : 'Sow ane Reap' ಇಂಗ್ಲಿಷ್ ಕವನ)

ನವೆಂಬರ್-ಡಿಸೆಂಬರ್ 1992ರ 'ಮಾನುಷಿ'ಯಲ್ಲಿ ಪ್ರಕಟಿತ
ಹೆಚ್. ಕೆ. ರಂಜನಿಯವರ ಕವನ 'Sow and Reap' ದಿಂದ ಪ್ರೇರಿತ)

# ಸ್ತ್ರೀವಾದದಿಂದ ಮಾನವ ಹಕ್ಕುಗಳೆಡೆಗೆ

## ನಂದಿತಾ ಹಕ್ಸರ್ ಸಂದರ್ಶನ

ಪ್ರ : ಮಹಿಳಾ ಚಳವಳಿಯಲ್ಲಿ ನೀವು ಹೇಗೆ ತೊಡಗಿಕೊಂಡಿರಿ ?

ಉ : ನಾನು ಮಹಿಳಾ ಚಳವಳಿಯಲ್ಲಿ ತೊಡಗಿಕೊಂಡಿದ್ದು ಸುಮಾರು 1979ರಲ್ಲಿ. ನಾನದನ್ನು ಮಹಿಳಾ ಚಳವಳಿ ಅನ್ನುವುದಕ್ಕಿಂತ ಸ್ತ್ರೀವಾದೀ ಚಳವಳಿ ಎಂದೇ ಕರೆಯುತ್ತೇನೆ. ಮಥುರಾ ಎಂಬ ಬಡ ಗಿನಜನ ಹುಡುಗಿಯ ಮೇಲೆ ಅತ್ಯಾಚಾರವೆಸಗಿದ ಇಬ್ಬರು ಪೋಲೀಸರನ್ನು ಸುಪ್ರೀಂಕೋರ್ಟು ನಿರಪರಾಧಿಗಳೆಂದು ತೀರ್ಪುಕೊಟ್ಟಿತು. ಈ ತೀರ್ಪು ಅನೇಕರ, ಮುಖ್ಯವಾಗಿ ಭಾರತದ ಸ್ತ್ರೀವಾದಿಗಳ ಒಳಪ್ರಜ್ಞೆಯನ್ನು ಬಡಿದೆಬ್ಬಿಸಿತು. ನಾವು ಅತ್ಯಾಚಾರ ಸಮಸ್ಯೆಯನ್ನು ಕುರಿತು ಚರ್ಚೆ ಪ್ರಾರಂಭಿಸಿದೆವು. ದಕ್ಷಿಣ ಬಿಹಾರದ ಸಾಂಥಾಲ್‌ನಲ್ಲಿ ಮಹಿಳೆಯರ ಮೇಲೆ ಪೋಲೀಸರು ಮತ್ತು ಭೂ ಮಾಲೀಕರಿಂದ ನಡೆದ ಅತ್ಯಾಚಾರವನ್ನು ಕುರಿತು ಕೆಲವು ಸ್ತ್ರೀವಾದೀಗಳು ವಿಚಾರಣೆ ನಡೆಸಿದ್ದು ನನಗೆ ನೆನಪಿದೆ. ಜಾರ್‌ಕಂಡ್ ಪ್ರದೇಶದಲ್ಲಿ ವಿಸ್ತಾರ ನೆಲೆಯನ್ನು ಹೊಂದಿದ್ದ

ಭಾರತದಲ್ಲಿ ಮಹಿಳಾ ಚಳವಳಿ ಒಂದೂವರೆ ದಶಕದಷ್ಟು ಹಳೆಯದಾಗಿದ್ದರೂ ಇಂದಿಗೂ ಅದರ ವ್ಯಾಪಕತೆ, ಹರವು ಸೀಮಿತವಾದದ್ದು ಎಂಬುದು ಸಾಮಾನ್ಯವಾಗಿ ಇರುವ ಅಭಿಪ್ರಾಯ. ಸಮಾಜದ ಎಲ್ಲ ಸ್ತರಗಳ ಮಹಿಳೆಯರನ್ನು ಒಳಗೊಂಡ ವ್ಯಾಪಕ ಚಳವಳಿಯಾಗಿ ಇದು ಬೆಳೆದಿಲ್ಲ ಎನ್ನುವಲ್ಲಿ ಈ ಅಭಿಪ್ರಾಯ ಸರಿಯೆನಿಸುವದಾದರೂ ಇದರ ಪ್ರಭಾವ ಸೀಮಿತವಾದದ್ದು ಎಂದು ಹೇಳಬರುವುದಿಲ್ಲ. ಸ್ತ್ರೀವಾದೀ ಚಳವಳಿ ಹುಟ್ಟುಹಾಕಿದ ನೀತಿ-ಮೌಲ್ಯಗಳನ್ನೇ ಆಧರಿಸಿ, ಅದರ ಫಲವಾಗಿಯೇ ರೂಪಿತಗೊಂಡ ಅನೇಕ ಕಾರ್ಯಕ್ರಮಗಳು, ಸಂಸ್ಥೆಗಳು, ವ್ಯಕ್ತಿಗಳು ಇಂದು ನಮ್ಮಲ್ಲಿ ವ್ಯಾಪಕವಾಗಿ ಕಾಣಸಿಗುತ್ತಾರೆ. ಆದರೆ ತಮ್ಮನ್ನು ಸ್ತ್ರೀವಾದಿಗಳೆಂದು ಗುರುತಿಸಿಕೊಳ್ಳುವಲ್ಲಿ ಮಾತ್ರ ಇಲ್ಲಿ ಮಡಿವಂತಿಕೆ ಇದೆ. ಇನ್ನೊಂದು ಕಡೆಯಲ್ಲಿ, ಸ್ತ್ರೀವಾದೀ ಚಳವಳಿಯ ಪ್ರಾರಂಭದಲ್ಲಿ ತುಂಬಾ ಸಕ್ರಿಯರಾಗಿದ್ದು ಅದರ ಹುಟ್ಟಿಗೆ, ಬೆಳವಣಿಗೆಗೆ ಅಪಾರ ಕೊಡುಗೆಯನ್ನಿತ್ತ ಅನೇಕ ಗಮನಾರ್ಹ ಮಹಿಳೆಯರು ತಮ್ಮನ್ನು ಇಂದಿಗೂ ಸ್ಪಷ್ಟವಾಗಿ ಸ್ತ್ರೀವಾದಿಗಳೆಂದು ಗುರುತಿಸಿಕೊಳ್ಳುವರಾದರೂ ಇಂದಿನ ಸಂದರ್ಭದ ಮಹಿಳಾ ಚಳವಳಿಯ ಭಾಗವಾಗಿ ತಮ್ಮನ್ನು ಗುರುತಿಸಿಕೊಳ್ಳಲು ಬಯಸುವದಿಲ್ಲ. ನಂದಿತಾ ಹಕ್ಸರ್ ಈ ಎರಡನೇ ಗುಂಪಿಗೆ ಸೇರಿದವರು.

ವೃತ್ತಿಯಿಂದ ವಕೀಲರಾದ ನಂದಿತಾ, ಭಾರತದಲ್ಲಿ ಸ್ತ್ರೀವಾದೀ ಚಳವಳಿಯ ಮುಂಚೂಣಿಯಲ್ಲಿದ್ದವರು. ಸಂವಿಧಾನ-ಕಾನೂನಿನ ಒಂದು ಸ್ತ್ರೀವಾದೀ ಟೀಕೆಯನ್ನು ಕಟ್ಟಿಕೊಟ್ಟವರೇ ನಂದಿತಾ. 1986ರಲ್ಲಿ ಆಕೆ ಬರೆದ ಸಚಿತ್ರ ಪುಸ್ತಕ ''Demystification of Law for women'' ಆ ನಿಟ್ಟಿನಲ್ಲಿ ನಡೆದ ಮೌಲಿಕ ಪ್ರಯತ್ನ. ತಮ್ಮ ಬರವಣಿಗೆ ಮತ್ತು ಶಿಬಿರಗಳ ಮೂಲಕ ಮಹಿಳೆಯರಲ್ಲಿ ಇಂತಹ ಪ್ರಜ್ಞೆ ಮೂಡಿಸಲು ಶ್ರಮಿಸಿದವರು ನಂದಿತಾ. ಆದರೆ ಇಂದು ಆಕೆ ಮಾನವ ಹಕ್ಕುಗಳ ಚಳವಳಿಯಲ್ಲಿ ಸಂಪೂರ್ಣ ತೊಡಗಿಸಿಕೊಂಡಿದ್ದು, ಮಹಿಳಾ ಚಳವಳಿಯ ಬಗ್ಗೆ ಅವಜ್ಞೆಯಿಂದಿದ್ದಾರೆ.

ಈಗ್ಗೆ ಕೆಲವು ತಿಂಗಳುಗಳಿಂದ ನಂದಿತಾ ಬೆಂಗಳೂರಿನಲ್ಲಿದ್ದಾಗ ಆಕೆಯೊಂದಿಗೆ ಅನೇಕ ದಿನಗಳನ್ನು ಕಳೆದಿದ್ದೆವು. ಮಾತುಕತೆಯಲ್ಲಿ ತೊಡಗಿದ್ದೆವು. ಅವರ ಅನುಭವ-ವಿಚಾರಗಳು ಇಂದು ಸ್ತ್ರೀವಾದೀ ಚಳವಳಿಯ ಭಾಗವಾಗಿರುವ ಎಲ್ಲರಿಗೂ ಉಪಯುಕ್ತ ಎನಿಸಿದ ಕಾರಣ ಅವರ ಸಂದರ್ಶನವೊಂದನ್ನು ಪ್ರಕಟಿಸುತ್ತಿದ್ದೇವೆ.

ಗಾಯತ್ರಿ ವಿ.

ಸರಸ್ವತಿ. ಮ

ಸ್ಥಳೀಯ ಟ್ರೇಡ್ ಯೂನಿಯನ್ ಅನ್ನು ಈ ಸಮಸ್ಯೆಯನ್ನು ಎತ್ತಿಕೊಳ್ಳುವಂತೆ ಅವರು ಕೇಳಿದರು. ಆದರೆ ಟ್ರೇಡ್-ಯೂನಿಯನ್ ನಾಯಕರಾದ A.K.R. ರಾಯ್ ಅವರು ಅದಕ್ಕೆ ನಿರಾಕರಿಸಿದರು. ಅತ್ಯಾಚಾರವನ್ನು ಒಂದು ರಾಜಕೀಯ ಸಮಸ್ಯೆಯಾಗಿ ಅವರು ಪರಿಗಣಿಸಲಿಲ್ಲ.

ಸೂಸನ್ ಬ್ರೌನ್ ಮಿಲ್ಲರ್ ಅವರ "Against our will" ಪುಸ್ತಕದಿಂದ ನಾವು ಪ್ರಭಾವಿತರಾಗಿದ್ದೆವು. ನಮ್ಮನ್ನು 'ಪಾಶ್ಚಾತ್ಯ ವಿಚಾರ' ಗಳಿಂದ ಪ್ರಭಾವಿತರಾದವರೆಂದು ದೂರಲಾಯಿತು. ನಾವು ಪಶ್ಚಿಮದ ಸ್ತ್ರೀವಾದೀಗಳು ಬರೆದ ಪುಸ್ತಕವನ್ನು ಓದಿಕೊಂಡದ್ದು ನಿಜ. ಆದರೆ ನಾವು ಇಲ್ಲಿ ನಮ್ಮದೇ ಆದ ರೀತಿಯಲ್ಲಿ ಸಮಸ್ಯೆಗಳ ಮೇಲೆ ಬೆಳಕುಚೆಲ್ಲಲು ಪ್ರಯತ್ನಿಸಿದೆವು. ಭಾರತೀಯ ರಾಜ್ಯಾಂಗವು ಮಥುರಾ, ರಮೀಸಾಬೀ ಮತ್ತು ಮಾಯಾತ್ಯಾಗಿಯ ರಂತ ಮಹಿಳೆಯರ ಮೇಲಿನ ಅತ್ಯಾಚಾರವನ್ನು ರಾಜಕೀಯ ಅಸ್ತ್ರವನ್ನಾಗಿ ಬಳಸಿಕೊಳ್ಳುತ್ತಿತ್ತು.

1979ರ ಮಾರ್ಚ್ 8ರಂದು ಅಂತರರಾಷ್ಟ್ರೀಯ ಮಹಿಳಾ ದಿನದ ಅಂಗವಾಗಿ ಒಂದು ಸಭೆಯನ್ನು ಏರ್ಪಡಿಸುವಲ್ಲಿ ನಾನು ತೊಡಗಿಕೊಂಡಿದ್ದೆ. ನಾನು ಇದೇ ಮೊದಲಬಾರಿಗೆ ಫೆಮಿನಿಸ್ಟರೊಂದಿಗೆ ಕೆಲಸ ಮಾಡುತ್ತಿದ್ದದ್ದು, ಮತ್ತು ನನ್ನ ತೊಡಗುವಿಕೆ ತೀವ್ರವಾಯಿತು. ನನ್ನನ್ನು ನನ್ನದೇ ಸ್ವಂತ ಹಕ್ಕುಗಳಿಂದ ರೂಪಿಕಗೊಳಿಸಿದ್ದು ಸ್ತ್ರೀವಾದೀ ಚಳವಳಿಯೇ. ಅಷ್ಟರಮಟ್ಟಿಗೆ ನಾನದನ್ನು ಅಂಗೀಕರಿಸುತ್ತೇನೆ. ಅದು ನನ್ನನ್ನು ಪಕ್ವಗೊಳಿಸಿತು, ನನ್ನಲ್ಲಿ ಆತ್ಮವಿಶ್ವಾಸ ಮತ್ತು ಧೈರ್ಯಗಳನ್ನು ತುಂಬಿತು. ಅದು ನನ್ನನ್ನು ಭಿನ್ನ ರೀತಿಯ ಮಾನವತೆಗೆ ಪಕ್ಕಾಗಿಸಿತು, ಅಲ್ಲದೆ ಇವೆಲ್ಲದಕ್ಕಿಂತ ಹೆಚ್ಚಾಗಿ ನನಗೆ ಮತ್ತು ನನ್ನಂತ ಅನೇಕರಿಗೆ ಮಹಿಳೆಯರ ತುಳಿತ ಮತ್ತು ಶೋಷಣೆಯ ಕಾರಣಗಳನ್ನು ಕಲಿತುಕೊಳ್ಳಲು, ಅರ್ಥಮಾಡಿಕೊಳ್ಳಲು ಸಹಾಯ ಮಾಡಿತು.

ಪ್ರ : ಸ್ತ್ರೀವಾದೀ ಚಳವಳಿಯಲ್ಲ ನಿಮ್ಮ ವಯಕ್ತಿಕ ಅನುಭವಗಳ ಬಗ್ಗೆ ಹೇಳುವಿರಾ ?

ಉ : ಮೊದಲೇ ಹೇಳಿದಂತೆ, ನಾನು ನನ್ನ ಬಗ್ಗೆ ಮತ್ತು ಮನುಷ್ಯ ಸಂಬಂಧಗಳ ಬಗ್ಗೆ ತುಂಬಾ ಕಲಿತೆ. ಇಲ್ಲಿ ತುಂಬಾ ರೋಮಾಂಚಕಾರಿ ಅನುಭವವೆಂದರೆ ನಮ್ಮ ಚರಿತ್ರೆಯನ್ನು ನಾವು ಕಂಡುಕೊಳ್ಳುವುದು ಜಗತ್ತಿನ ಎಲ್ಲಾ ಕಡೆಗಳಲ್ಲಿ, ಟರ್ಕಿ, ಅಲ್ಜೀರಿಯಾ, ಅರ್ಜೆಂಟೈನಾ, ಚೈನಾ ಮತ್ತು ಇಲ್ಲಿ - ನಮ್ಮ ಭಾರತದಲ್ಲಿ ಮಹಿಳೆಯರು ತಮ್ಮ ತುಳಿತದ ವಿರುದ್ಧ, ತಾರತಮ್ಯದ ವಿರುದ್ಧ ಹೋರಾಟ ನಡೆಸಿದ್ದಾರೆ ಎಂಬುದನ್ನು ನಾವು ಕಂಡುಕೊಂಡೆವು. ಪಂಡಿತ ರಮಾಬಾಯಿ ನನಗೆ ಅತ್ಯಂತ ಸ್ಫೂರ್ತಿಕಾರೀ ಮಹಿಳೆಯಾಗಿದ್ದರು.

ಪ್ರ : ನೀವು ಪ್ರಾರಂಭದಲ್ಲೇ ಮಹಿಳಾ ಚಳವಳಿ ಮತ್ತು ಸ್ತ್ರೀವಾದೀ ಚಳವಳಿಗಳನ್ನು ವ್ಯತ್ಯಾಸಿಸಿ ಹೇಳಿದ್ದೀರಿ. ಈ ವ್ಯತ್ಯಾಸವನ್ನು ಸ್ವಲ್ಪ ವಿವರಿಸುವಿರಾ ?

ಉ : ಸ್ತ್ರೀವಾದೀ ಚಳವಳಿಯೆನ್ನುವುದು, ಮಹಿಳೆಯರು ತಮ್ಮ ಸಮಸ್ಯೆಗಳ ಸುತ್ತಲೂ ಮಹಿಳೆಯರಾಗಿ ಸಂಘಟಿತಗೊಳ್ಳುವ ಮಹಿಳೆಯರ ಚಳವಳಿ, ಇದು ಮಹಿಳೆಯರು ಇತರ ಹೋರಾಟಗಳಲ್ಲಿ, ರೈತಾಪಿ ಜನರ ಹೋರಾಟ ಅಥವಾ ರಾಷ್ಟ್ರೀಯ ವಿಮೋಚನಾ ಹೋರಾಟ ಇತ್ಯಾದಿಗಳಲ್ಲಿ ಭಾಗವಹಿಸುವುದಕ್ಕಿಂತ ಭಿನ್ನವಾದುದು. Trinidad ಮತ್ತು Tobagoನ ಒಬ್ಬ ಸ್ತ್ರೀವಾದೀ ಈ ವ್ಯತ್ಯಾಸವನ್ನು ಸುಂದರವಾಗಿ ವಿವರಿಸಿದ್ದಾರೆ : "ಸ್ತ್ರೀವಾದ ಎನ್ನುವುದು ಕುಟುಂಬದೊಳಗಡೆ, ಕೆಲಸದಲ್ಲಿ ಮತ್ತು ಸಮಾಜದಲ್ಲಿ ಮಹಿಳೆಯರ ತುಳಿತ ಮತ್ತು ಶೋಷಣೆಯನ್ನು ಕುರಿತ ಅರಿವು ಮತ್ತು ಮಹಿಳೆ-ಪುರುಷರಿಂದ ಈ ಸ್ಥಿತಿಯ ಬದಲಾವಣೆಗಾಗಿ ಪ್ರಜ್ಞಾಪೂರ್ವಕ ಕ್ರಿಯೆ. ಮಹಿಳೆಯರ ವಿರುದ್ಧದ ತಾರತಮ್ಯವನ್ನು ಹೋಗಲಾಡಿಸಲು ಸಮಾನ ಹಕ್ಕು ಮತ್ತು ಕಾನೂನಿನಲ್ಲಿ ಸುಧಾರಣೆಗಾಗಿ ನಡೆಸುವ ಹೋರಾಟವನ್ನೂ ಒಳಗೊಂಡಿರುವ ಸಮಾನತೆ ಮತ್ತು ವಿಮೋಚನೆಯ ಯಾವುದೇ ಚಳವಳಿಗಿಂತ ಸ್ತ್ರೀವಾದವು ಭಿನ್ನವಾದದ್ದು. ಏಕೆಂದರೆ ಇಲ್ಲೆಲ್ಲೂ ಕುಟುಂಬದೊಳಗೆ ಮಹಿಳೆಯರ ಅಧೀನತೆಯಂತಹ ಮೂಲಭೂತವಾದ ಮಹಿಳೆಯರ ಸಮಸ್ಯೆಗಳನ್ನಾಗಲೀ ಅಥವಾ

ಪ್ರಸ್ತುತದ ಆರ್ಥಿಕ ಮತ್ತು ರಾಜಕೀಯ ವ್ಯವಸ್ಥೆಯನ್ನಾಗಲೀ ಇವು ಕೈಗೆತ್ತಿಕೊಳ್ಳುವುದಿಲ್ಲ.

ಪ್ರ : ಇಂದು ನಾವು ಅನೇಕ ಬಗೆಯ ಸ್ತ್ರೀವಾದಗಳನ್ನು ಕುರಿತು ಕೇಳುತ್ತಿದ್ದೇವೆ. ಇಂತಹ ಭಿನ್ನತೆಗಳು ಅನಿವಾರ್ಯವೇ? ಇವರೆಲ್ಲ ಒಟ್ಟಿಗೆ ಬಂದಾಗ ಚಳವಳಿ ಇನ್ನೂ ದೃಢವಾಗುವುದಿಲ್ಲವೇ?

ಉ : ವಿಸ್ತಾರವಾಗಿ ಮೂರು ಬಗೆಯ ಸ್ತ್ರೀವಾದಿ ವಿಶ್ಲೇಷಣೆಯಿರುವುದನ್ನು ನಾನು ಗುರುತಿಸುತ್ತೇನೆ; ಉದಾರವಾದೀ ಸ್ತ್ರೀವಾದಿಗಳು, ರ್‍ಯಾಡಿಕಲ್ ಸ್ತ್ರೀವಾದಿಗಳು ಮತ್ತು ಸಮಾಜವಾದೀ ಸ್ತ್ರೀವಾದಿಗಳು. ಸಮಾಜ ಮತ್ತು "ರಾಜ್ಯಾಂಗದ ಸ್ವರೂಪವನ್ನು ಅರ್ಥಮಾಡಿಕೊಳ್ಳುವ ರೀತಿಯ ಮೇಲೆ ಈ ವಿಭಾಗಗಳು ಅವಲಂಭಿಸಿದೆ. ಉದಾರವಾದೀ ಸ್ತ್ರೀವಾದಿಗಳು ಮಹಿಳೆಯರ ತುಳಿತಕ್ಕೆ ಮೂಲ ಕಾರಣ ಬೇಧ ಭಾವವೇ ಎಂಬಂತೆ ನೋಡುತ್ತಾರೆ. ಅವರು ಕಾನೂನು ಸುಧಾರಣೆಯೆಡೆಗೆ ಹೆಚ್ಚು ಒತ್ತು ಕೊಟ್ಟು ಮಹಿಳೆಯರ ಸಮಾನ ಹಕ್ಕುಗಳಿಗಾಗಿ, ಮತ ನೀಡಿಕೆಗೆ, ವೃತ್ತಿಗಳಿಗೆ ಮತ್ತು ಶೈಕ್ಷಣಿಕ ಸಂಸ್ಥೆಗಳಿಗೆ ಹೋರಾಟ ನಡೆಸಿದ್ದಾರೆ.

ರ್‍ಯಾಡಿಕಲ್ ಸ್ತ್ರೀವಾದಿಗಳು, ಪಿತೃ ಪ್ರಧಾನತೆಯೇ ಮಹಿಳೆಯರ ತುಳಿತಕ್ಕೆ ಮೂಲ ಎಂದು ನಂಬುತ್ತಾರೆ. ಅವರು ಕುಟುಂಬದೊಳಗಿನ ಸಂಬಂಧಗಳೇ ಅಧಿಕಾರ ಮತ್ತು ಅಸಮಾನತೆಯನ್ನು ಬಿಂಬಿಸುತ್ತವೆ ಎಂಬಂಶವನ್ನು ಬಯಲು ಮಾಡಿದ್ದಾರೆ. ಅವರು ಈ ಅಸಮಾನತೆಯನ್ನು ಮಹಿಳೆ ಮತ್ತು ಪುರುಷರ ನಡುವಿನ ವೈರುಧ್ಯವೆಂಬಂತೆ ನೋಡಿದ್ದಾರೆ.

ಸಮಾಜವಾದೀ ಸ್ತ್ರೀವಾದಿಗಳು ಇನ್ನೂ ಮುಂದೆ ಹೋಗಿ ವರ್ಗ ಶೋಷಣೆಯನ್ನು ಲಿಂಗ, ವರ್ಣ, ಮತ್ತು ಇಲ್ಲಿ ಭಾರತದಲ್ಲಿ ಜಾತಿಯ ತುಳಿತದೊಟ್ಟಿಗೆ ಸಂಬಂಧ ತರಲು ಪ್ರಯತ್ನಿಸಿದ್ದಾರೆ. ಸಮಾಜವಾದೀ ಸ್ತ್ರೀವಾದೀಗಳು, ವಿಮೋಚನೆಯೆಡೆಗಿನ ಸಂಘರ್ಷವು ಈ ಎಲ್ಲ ಬಗೆಯ ದಮನಗಳ ವಿರುದ್ಧದ ಸಂಘರ್ಷವನ್ನು ಒಳಗೊಳ್ಳಬೇಕು ಮತ್ತು ಯಾವುದೂ ಮತ್ತೊಂದಕ್ಕಿಂತ ಮುಖ್ಯವೂ ಅಲ್ಲ ಅಮುಖ್ಯವೂ ಅಲ್ಲ ಎಂಬುದನ್ನು ಒತ್ತಿ ಹೇಳಿದ್ದಾರೆ. ಈ ಮಹಿಳೆಯರೆಲ್ಲಾ ಎಡ ಇಲ್ಲವೇ ಮಾರ್ಕ್ಸ್‌ವಾದೀ ಹಿನ್ನೆಲೆಯಿಂದ ಬಂದವರು ಮತ್ತು ಇವರು ಮಹಿಳಾ ವಿಮೋಚನೆಯ ಹೋರಾಟ ಎಲ್ಲ ಮಾನವ ಜನಾಂಗದ ವಿಮೋಚನೆಯ ಹೋರಾಟದ ಭಾಗ ಎಂಬಂತೆಯೇ ಯಾವಾಗಲೂ ನೋಡಿದ್ದಾರೆ. ಭಾರತದಲ್ಲಿ ಅನೇಕರು, ನಿಜ ಹೇಳಬೇಕೆಂದರೆ ನಾವು ಬಹುಪಾಲು ಸ್ತ್ರೀವಾದೀಗಳು ಪ್ರಾರಂಭದ ದಿನಗಳಲ್ಲಿ ಇಂತಹ ಹಿನ್ನೆಲೆಯಿಂದಲೇ ಬಂದವರಾಗಿದ್ದೆವು.

ಈ ಎಲ್ಲಾ ವಾಹಿನಿಗಳ ಸ್ತ್ರೀವಾದಿಗಳು ಕೆಲವು ಸಮಸ್ಯೆಗಳ ಸಂಬಂಧದಲ್ಲಿ ಉದಾ : ಕೌಟುಂಬಿಕ ಹಿಂಸಾಚಾರ, ಒಟ್ಟಿಗೆ ಬರುವುದುಂಟು. ಅದೇನೇಯಾದರೂ ಎಲ್ಲಾ ಗುಂಪುಗಳು ತುಳಿತದ ಸ್ವರೂಪವನ್ನು ವಿಶ್ಲೇಷಿಸುವ ರೀತಿ ಬೇರೆಯಾಗಿರುವುದರಿಂದ ನಾವು ಕಂಡುಕೊಳ್ಳುವ ಪರಿಹಾರಗಳೂ ಬೇರೆ ಬೇರೆಯಾಗಿದೆ. ಇದು ನಮ್ಮ ಹೋರಾಟದ ರೀತಿಯನ್ನೂ ಅವಲಂಬಿಸಿರುತ್ತದೆ.

ಪ್ರ : ಮಹಿಳಾ ಚಳುವಳಿಗೆ ಬೇರೆ ಸಾಮಾಜಿಕ ಚಳವಳಿಗಳೊಟ್ಟಿಗೆ ದಲಿತ ಚಳಿವಳಿ, ರೈತ ಚಳವಳಿ, ಕಾರ್ಮಿಕ ಚಳವಳಿ ಇತ್ಯಾದಿ, ಸಂಪರ್ಕ ರೂಪಿಸಿಕೊಳ್ಳಲು ಸಾಧ್ಯವೇ? ಮತ್ತು ಇದು ಅವಶ್ಯಕವೇ?

ಉ : ಖಂಡಿತಾ ಸಾಧ್ಯ ಮತ್ತು ಇದು ತುಂಬಾ ಅವಶ್ಯಕ. ಇಂತಹ ಸಂಪರ್ಕ ಸ್ವಲ್ಪ ಮಟ್ಟಿಗೆ, ಕೆಲವು ರೀತಿಯಲ್ಲಿ ಇದೆ. ಆದರೆ ಅದು ಶಕ್ತಿಶಾಲಿಯಾಗಿಲ್ಲ. ಮಹಾರಾಷ್ಟ್ರದಲ್ಲಿ ಸ್ತ್ರೀವಾದೀಗಳು ಮತ್ತು ಟ್ರೇಡ್ ಯೂನಿಯನ್ ಚಳವಳಿಗಳ ಮಧ್ಯ; ಮಹಿಳಾ ಚಳವಳಿ ಮತ್ತು ಪರಿಸರ ಚಳವಳಿಯ ಮಧ್ಯೆ; ಮಹಿಳಾ ಚಳವಳಿ ಮತ್ತು ದಲಿತ ಚಳವಳಿಯ ಮಧ್ಯೆ ಅನೇಕ ರೀತಿಯ ಕೊಂಡಿಗಳಿವೆ. ಹಲವಾರು ಸ್ತ್ರೀವಾದಿಗಳು ಈ ಅನೇಕ ಚಳವಳಿಗಳಲ್ಲಿ ಕೆಲಸ ಮಾಡುತ್ತಿದ್ದು ಹೋರಾಟದ ಮೇಲೆ ಪ್ರಭಾವ ತರುವುದು ಅವರಿಗೆ ಸಾಧ್ಯವಾಗಿದೆ.

ಆದರೂ ನಾವು ನಮ್ಮಿಂದ ಮಾಡಲು ಸಾಧ್ಯವಿದ್ದಷ್ಟನ್ನು ಮಾಡಿಲ್ಲ. ನಾವು ಇನ್ನೂ ಹೆಚ್ಚು ಬರೆಯಬೇಕಿತ್ತು, ನಮ್ಮ ವಿಶ್ಲೇಷಣೆಯನ್ನು ಹರಿತಗೊಳಿಸಬೇಕಿತ್ತು, ಮತ್ತು ಆ ಮೂಲಕ ನಮ್ಮ

ಸಿದ್ಧಾಂತವನ್ನು ರೂಪಿಸಬೇಕಿತ್ತು. ನಮಗೆ ಈ ಸಮಸ್ಯೆಯೆಡೆಗೆ ಇನ್ನೂ ಉತ್ತಮ ಸೈದ್ಧಾಂತಿಕ ಅರ್ಥ ಗ್ರಹಿಕೆ ಬೇಕು ಎಂದು ನನಗನ್ನಿಸುತ್ತದೆ. ಇದನ್ನು ಆಧರಿಸಿಯೇ ಮುಂದಿನ ಮುಂದುವರೆದ ಕ್ರಿಯೆಗಳಿಗೆ ನಾವು ತಂತ್ರಗಳನ್ನು ಮತ್ತು ಕಾರ್ಯಕ್ರಮಗಳನ್ನು ಯೋಜಿಸಿಕೊಳ್ಳಬೇಕಾಗುತ್ತದೆ.

ಪ್ರ : ಇಂದು ಸ್ತ್ರೀವಾದೀ ಚಳವಳಿಯ ಬಗ್ಗೆ ನಿಮಗೆ ನಿಮ್ಮದೇ ಆದ ಕಟು ಟೀಕೆ ಇದೆ. ನಿಮ್ಮ ಈ ಟೀಕೆಯನ್ನು ನಮ್ಮೊಂದಿಗೆ ಹಂಚಿಕೊಳ್ಳುವಿರಾ?

ಉ : ಖಂಡಿತಾ. ನಾನು ಈ ಹಿಂದೆಯೇ ವಿವರಿಸಿರುವಂತೆ ಭಾರತದಲ್ಲಿ ಪ್ರಾರಂಭದ ಸ್ತ್ರೀವಾದೀಗಳು ಸಮಾಜವಾದೀ ಸ್ತ್ರೀವಾದಿಗಳಾಗಿದ್ದರು. ನಮ್ಮಲ್ಲಿ ಅನೇಕರು ಎಡಪಕ್ಷಗಳು, ಟ್ರೇಡ್ ಯೂನಿಯನ್‌ಗಳು ಅಥವಾ ವಿದ್ಯಾರ್ಥಿ ಚಳವಳಿಗಳಲ್ಲಿ ಇದ್ದವು. ನಿರ್ದಿಷ್ಟವಾಗಿ ಮಹಿಳೆಯರ ದಮನಕ್ಕೆ ಸಂಬಂಧಿಸಿದ ಸಮಸ್ಯೆಗಳೆಡೆಗೆ ನಮ್ಮ ಕಳಕಳಿಯ ದನಿ ಎತ್ತುವಲ್ಲಿ ಸಾಧ್ಯವಾಗದೇ ಹೋಗುತ್ತಿದ್ದುದನ್ನು ನಾವು ಕಂಡುಕೊಂಡೆವು. ಈ ಚಳವಳಿಗಳೊಳಗೇ ರಾಜಕೀಯವಾಗಿ ಮುಖ್ಯ ಎನಿಸಿದ್ದ ಬೆಲೆ ಏರಿಕೆ, ಶಾಂತಿ ಅಥವಾ ಕೋಮುವಾದ ಮುಂತಾದ ಸಮಸ್ಯೆಗಳನ್ನು ಎತ್ತಿಕೊಂಡು ಜನ ಸಂಘಟನೆ ಮಾಡುತ್ತಿದ್ದೆವು. ಆದರೆ ಇದ್ಯಾವುದೂ ನಿರ್ದಿಷ್ಟವಾಗಿ ಮಹಿಳೆಯರಿಗೆ ಸಂಬಂಧಿಸಿದಂತವಲ್ಲ.

ಇಂದು ಭಾರತದಲ್ಲಿನ ಸ್ತ್ರೀವಾದೀಗಳು (ಕೆಲವರನ್ನು ಹೊರತು ಪಡಿಸಿ), ಸಮಾಜವಾದೀ ಸ್ತ್ರೀವಾದದ ದೃಷ್ಟಿಯನ್ನೇ ಕೈಬಿಡುತ್ತಿದ್ದಾರೆ ಮತ್ತು ಮಹಿಳೆಯ ಸಮಸ್ಯೆಗಳನ್ನು ಇತರ ಸಮಸ್ಯೆಗಳಿಂದ ಯಾವಾಗಲೂ ಪ್ರತ್ಯೇಕಿಸಿ ನೋಡುತ್ತಾರೆ. ಸ್ವಾಯತ್ತ ಮಹಿಳಾ ಚಳವಳಿಯು ದಲಿತ ಮಹಿಳೆಯರನ್ನಾಗಲೀ ಇಲ್ಲವೇ ಅಲ್ಪ ಸಂಖ್ಯಾತರ ಮಹಿಳೆಯರನ್ನಾಗಲೀ ತನ್ನೆಡೆಗೆ ಸೆಳೆದುಕೊಳ್ಳುವಲ್ಲಿ ಸೋತಿದೆ. ನಾನು ಹೇಳುತ್ತಿರುವ ಪ್ರತಿಯೊಂದು ಮಾತಿಗೂ ಅಪವಾದಗಳಿದ್ದೇ ಇದೆ. ಆದರೆ ಒಂದು ಒಟ್ಟಾರೆಯಲ್ಲಿ ನನ್ನ ಟೀಕೆ ನಿಲ್ಲುತ್ತದೆಯೆಂದು ಭಾವಿಸುತ್ತೇನೆ. ಶಾಬಾನು ಕೇಸಿನ ವೈರುಧ್ಯದ ಸಂದರ್ಭದಲ್ಲಿ ಇದು ತುಂಬಾ ಬಲವಾಗಿ ಹೊರಬಂತು. ಸ್ತ್ರೀವಾದೀಗಳು ಮತ್ತು ಮಹಿಳಾ ಚಳವಳಿ ತೀರ್ಪನ್ನು ಸ್ವಾಗತಿಸಿದರಾದರೂ ತಾವು ಕೋಮುವಾದೀ ಬಲೆಯಲ್ಲಿ ಹೇಗೆ ಸಿಕ್ಕಿಬಿದ್ದೆವೆನ್ನುವುದನ್ನು ನೋಡುವಲ್ಲಿ ಸೋತರು. Uniform Civil Code ಗಾಗಿ ನಮ್ಮ ಬೇಡಿಕೆ ವಿಶ್ವ ಹಿಂದೂ ಪರಿಷತ್ ಆದಕ್ಕಾಗಿ ಒಡ್ಡಿದ ಬೇಡಿಕೆಗಿಂತ ಸಂಪೂರ್ಣ ಹೇಗೆ ಭಿನ್ನವಾದದ್ದು ಎಂದು ತೋರಿಸಿಕೊಡುವಲ್ಲಿ ನಾವು ಸೋತೆವು. ಇಸ್ಲಾಂ ವಿವಾಹದೊಳಗಡೆ ಇರುವುದು ಒಪ್ಪಂದ ಮಾತ್ರ ಪವಿತ್ರ ಬಂಧನವಲ್ಲ ಎಂಬ ವಿಷಯದಲ್ಲಿ ಮುಸಲ್ಮಾನರು ಹೆಮ್ಮೆ ಪಡುತ್ತಿರುವ ವಿಚಾರವನ್ನು ಅರ್ಥಮಾಡಿಕೊಳ್ಳುವಲ್ಲಿ ಕೂಡ ನಾವು ಸೋತೆವು. ಇದರರ್ಥ ವಿವಾಹ ವಿಚ್ಛೇದನ ಪಡೆದ ಅಥವಾ ವಿಧವೆಯಾದ ಹೆಣ್ಣಿನ ಸಂಬಂಧದಲ್ಲಿ ನಿಷಿದ್ಧತೆ ಇಲ್ಲ ಎಂದಾಗುತ್ತದೆ. ಮದುವೆಯನ್ನು ಪವಿತ್ರ ಬಂಧವೆಂಬಂತೆ ಪರಿಗಣಿಸುವ ಮತ್ತು ಒಬ್ಬ ಹುಚ್ಚನೊಂದಿಗಿನ ಮದುವೆಯೂ ಮೌಲ್ಯವುಳ್ಳದ್ದು ಎಂದು ನೋಡುವ ಹಿಂದೂ ಸಂಪ್ರದಾಯಕ್ಕೆ ಇದು ಸಂಪೂರ್ಣ ವಿರುದ್ಧವಾಗಿತ್ತು. ಅನೇಕ ತೀರ್ಪುಗಳು ಇದನ್ನು ಹೇಳಿವೆ.

ಸ್ತ್ರೀವಾದೀ ಚಳವಳಿಯು ಹೆಚ್ಚಾಗಿ ಮೇಲ್ಜಾತಿಯ ಹಿಂದೂ ಮಹಿಳೆಯರ ಮೇಲುಗೈಯನ್ನೇ ಹೊಂದಿದೆ. ಇವರಿಗೆ ಪಾತ್ರವಿಲ್ಲ ಎಂದು ನಾನು ಹೇಳುತ್ತಿಲ್ಲ. ಆದರೆ ನಮ್ಮದೇ ಆದ ಒಲವು/ಪ್ರೇರಣೆಗಳನ್ನು ಗುರುತಿಸಿಕೊಂಡು, ಪ್ರಾಮಾಣಿಕವಾಗಿ ಅವುಗಳನ್ನು ಎದುರಿಸುವುದನ್ನು ಕಲಿಯಬೇಕಾದ ಅವಶ್ಯಕತೆ ಇದೆ.

ಸ್ವಾಯತ್ತ ಮಹಿಳಾ ಗುಂಪುಗಳ ಒಳಗಡೆಯೇ ಬಲವಾದ ವರ್ಗ ವಿಭಜನೆ ಇರುವುದನ್ನು ನಾನು ಕಂಡುಕೊಂಡಿದ್ದೇನೆ. ನಾಯಕತ್ವ ಹಿಂದೆಯೂ, ಇಂದೂ ಮುಖ್ಯವಾಗಿ ಇಂಗ್ಲೀಷ್ ಮಾತನಾಡುವವರಲ್ಲಿ ಇದ್ದು, ಕಾರ್ಯಕರ್ತೆಯರು ಇಂಗ್ಲೀಷ್ ಬಲ್ಲದ ಅಥವಾ ಇಂಗ್ಲೀಷಿನೊಂದಿಗೆ ಆರಾಮವಾಗಿರಲಾರದ ಮಹಿಳೆಯರು. ಇಂತಹ ಶ್ರೇಣೀಕರಣ ಬೇರೆ ಚಳವಳಿಯಲ್ಲಿ ಇಲ್ಲ ಎಂದು ನಾನು ಹೇಳುತ್ತಿಲ್ಲ ಆದರೆ, ಅನೇಕ ಸಲ ನಮ್ಮ

ಸಾಮಾಜಿಕ ಸಂಬಂಧಗಳಲ್ಲಿ ಬಿಂಬಿತಗೊಳ್ಳುವ ಇಂತಹ ವಿಭಜನೆಗಳು ನನಗೆ ಒಂದು ಚೂರು ಆರಾಮವೆನಿಸುವುದಿಲ್ಲ.

ಕೊನೆಯದಾಗಿ, ಅನೇಕಾನೇಕ ಸ್ತ್ರೀವಾದೀಗಳು ರಾಜ್ಯಾಂಗದ ರಚನೆಯೊಳಗಡೆಗೆ ಇಲ್ಲವೇ ಪ್ರಾಜೆಕ್ಟ್ ಸಂಸ್ಕೃತಿಗಳೊಳಗಡೆಗೆ ಸೇರಿಹೋಗಿ ಬಿಟ್ಟು, ವಿಮೋಚನಾ ಹೋರಾಟದೆಡೆಗಿನ ರಾಜಕೀಯ ನಿಲುವನ್ನೇ/ದೃಷ್ಟಿ ಕೋನವನ್ನೇ ಬಿಟ್ಟುಕೊಟ್ಟಿದ್ದಾರೆ.

ಪ್ರ : ಸ್ತ್ರೀವಾದಿಗಳೆಂದರೆ ಪಟ್ಟಣದ ಮಧ್ಯಮ, ಮೇಲು ಮಧ್ಯಮ ವರ್ಗದ ಮಹಿಳೆಯರು ಮಾತ್ರ ಎಂಬ ಬಲವಾದ ನಂಬಿಕೆ ಬಹುಪಾಲು ಜನರಲ್ಲಿದೆ. ಇನ್ನೊಂದು ಕಡೆಯಲ್ಲಿ (ಮುಖ್ಯವಾಗಿ ಕೂಲಿಕಾರ ಮಹಿಳೆಯರ ಸಂಘಟನೆಯಲ್ಲಿರುವಂತಹವರು) ಮಹಿಳಾ ಚಳವಳಿಯಲ್ಲಿ ಈ ಮಧ್ಯಮ ವರ್ಗದ ಮಹಿಳೆಯರ ಪಾತ್ರ ಇರುವುದನ್ನು ಸಂಪೂರ್ಣ ತಳ್ಳಿ ಹಾಕುತ್ತಾರೆ. ಇಂತಹ ಸ್ಥಿತಿಯಲ್ಲಿ ಮಹಿಳಾ ಚಳವಳಿಯಲ್ಲಿ ಇವರ ನಿಜವಾದ ಪಾತ್ರ ಎಂತದ್ದು ಎಂದು ನಿಮಗನ್ನಿಸುತ್ತದೆ ?

ಉ : ನೀವೇನು ಹೇಳುತ್ತಿದ್ದೀರಿ ಎಂದು ನನಗೆ ಸಂಪೂರ್ಣ ಸ್ಪಷ್ಟವಾಗಿಲ್ಲ. ನಗರಗಳಲ್ಲಿನ ಮಧ್ಯಮ ವರ್ಗದ ಮಹಿಳೆಯರು ತಮ್ಮನ್ನು ಬಾಧಿಸುವ ಸಮಸ್ಯೆಗಳ ಸುತ್ತಲೂ ಸಂಘಟಿತಗೊಳ್ಳುತ್ತಾ ಬಂದಿದ್ದಾರೆ. ಚಳವಳಿಯಿಂದ ಎಲ್ಲ ಮಹಿಳೆಯರೂ ಗಮನಾರ್ಹ ಕೊಡುಗೆಯನ್ನು ಪಡೆದುಕೊಂಡಿದ್ದಾರೆ ಎಂಬುದರಲ್ಲಿ ಒಂದು ಚೂರೂ ಅನುಮಾನವಿಲ್ಲ. ಅದೇನೇಯಾದರೂ, ಇವರಲ್ಲಿ ಕೆಲವೇ ಕೆಲವು ಮಹಿಳೆಯರು ಸಮೂಹ ಸಂಘಟನೆಯಲ್ಲಿ ತೊಡಗಿಕೊಂಡರು. ಅವರೂ ಬಹಳ ಕಾಲ ಕೆಲಸ ಮಾಡಲು ಸಾಧ್ಯವಾಗಲಿಲ್ಲ. ಇದಕ್ಕೆ ಅಪವಾದಗಳೂ ಇವೆ. ಏಕೆ ಹೇಗಾಗುತ್ತದೆಂದರೆ, ಒಬ್ಬ ಮಧ್ಯಮ ವರ್ಗದ ಮಹಿಳೆ ಪೂರ್ಣಾವಧಿ ಆಧಾರದಲ್ಲಿ ಹೀಗೆ ಕೆಲಸಮಾಡಲು ಹೊರಟಾಗ, ಆಕೆ ಹೆಚ್ಚು ಕಮ್ಮಿ ಸಾಂಪ್ರದಾಯಿಕ ಕುಟುಂಬಗಳಿಂದ ಮತ್ತು ವಿವಾಹ ಸಂಸ್ಥೆಗಳಿಂದ ಕಡಿದುಕೊಂಡು ಬಿಡಬೇಕಾದಂತಹ ಒತ್ತಡ ಆಕೆಯ ಮೇಲಿರುತ್ತದೆ. ಇದು ತುಂಬಾ ನೋವಿನ ಮತ್ತು ಕಷ್ಟಕರವಾದ ಸಂಗತಿ. ಅನೇಕ ಮಹಿಳೆಯರು ಹೀಗೆ ಕಂಗೆಟ್ಟಿದ್ದಾರೆ. ಇವತ್ತಿನ ಸಂದರ್ಭದಲ್ಲಿ ಇದು ಸ್ವಲ್ಪ ಸುಲಭವೇನೋ, ಏಕೆಂದರೆ ಮಹಿಳಾ ಚಳವಳಿ ಮಹಿಳೆಯರಿಗೆ ಒಂದು space ಅನ್ನು ಸೃಷ್ಟಿಸಿ ಕೊಟ್ಟಿದೆ.

ಪ್ರ : ಸರ್ಕಾರ ಮಹಿಳೆಯರಿಗಾಗಿ ಅನೇಕ ಕಾರ್ಯಕ್ರಮಗಳನ್ನು ಹಾಕಿಕೊಳ್ಳುತ್ತಾ ಬಂದಿದೆ. ಇತ್ತೀಚೆಗಂತೂ ಮಹಿಳಾ ಚಳವಳಿಯಿಂದ ಪ್ರೇರಿತಗೊಂಡು ರೂಪಿಸಲ್ಪಟ್ಟ ಸರ್ಕಾರಿ ಕಾರ್ಯಕ್ರಮಗಳು ದೊಡ್ಡ ರೀತಿಯಲ್ಲಿ ಬರುತ್ತಿವೆ. ಇವು ನಿಜಕ್ಕೂ ಮಹಿಳಾ ಚಳವಳಿಯ ಭಾಗವಾಗಲು ಸಾಧ್ಯವೇ ?

ಉ : ಇದು ನಾಲ್ಕು ಸಾಲಿನಲ್ಲಿ ಉತ್ತರಿಸಲು ಸಾಧ್ಯವಾಗದ ಕಷ್ಟದ ಪ್ರಶ್ನೆ. ಹಾಗೆ ಮಾಡಿದರೆ ನಾನದಕ್ಕೆ ನ್ಯಾಯ ಒದಗಿಸಿದಂತೆ ಆಗುವುದೂ ಇಲ್ಲ. ಇದು ತುಂಬಾ ಮುಖ್ಯ ಪ್ರಶ್ನೆ. ನೀವು ಇದರ ಬಗ್ಗೆ ವಿವರವಾದ ಚರ್ಚೆಯನ್ನು ಬೆಳೆಸುವಿರೆಂದು ನಂಬುತ್ತೇನೆ. ಸರ್ಕಾರ ಹಮ್ಮಿಕೊಂಡ ಮಹಿಳಾ ಕಾರ್ಯಕ್ರಮಗಳು ಸರ್ಕಾರದ ಕಲ್ಯಾಣ ಯೋಜನೆಗಳ ಭಾಗ ಎಂದು ಹೇಳುವಲ್ಲಿಂದ ನಾನು ಪ್ರಾರಂಭಿಸುತ್ತೇನೆ. ಸಮಾಜದೊಳಗಣ ಪಿತೃಪ್ರಧಾನತೆಗೆ ಸವಾಲಾಗುವ ರೀತಿಯಲ್ಲಿ ಇವನ್ನು ರೂಪಿಸಲಾಗಿಲ್ಲ. ಅದೇನೇಯಾದರೂ, ಮಹಿಳಾ ಚಳವಳಿ ಇದರಲ್ಲಿ ಮಧ್ಯ ಪ್ರವೇಶಿಸಿದರೆ, ಒಳರಚನೆಗಳನ್ನು ಉಪಯೋಗಿಸಿಕೊಂಡರೆ ಮಹಿಳೆಯರಲ್ಲಿ ರಾಜಕೀಯ ಪ್ರಜ್ಞೆ ಹುಟ್ಟುಹಾಕಲು ಸಾಧ್ಯ. ಇದು ವಿಶೇಷವಾಗಿ ಗ್ರಾಮಾಂತರ ಪ್ರದೇಶಗಳಲ್ಲಿ ತುಂಬಾ ಸಹಾಯಕ್ಕೆ ಬರುತ್ತದೆ. ರಾಜಸ್ತಾನದಲ್ಲಿ ಈ ಬಗೆಯ ಮಧ್ಯಪ್ರವೇಶಿಕೆಯ ತುಂಬಾ ಸಫಲ ಪ್ರಯತ್ನಗಳು ನಡೆದಿವೆ. ಕರ್ನಾಟಕದಲ್ಲೂ ಇಂತದೇನೋ ನಡೆದಿದೆಯೆಂದು ಕೇಳಿಪಟ್ಟೆ. ಆಂಧ್ರ ಪ್ರದೇಶದಲ್ಲಿ ರಾಷ್ಟ್ರೀಯ ಸಾಕ್ಷರತಾ ಕಾರ್ಯಕ್ರಮ ಜಾರಿಯಾದಾಗ, ಸಾರಾಯಿ ವಿರುದ್ಧದ ಬಲವಾದ ಚಳವಳಿ ಪ್ರಾರಂಭವಾಯಿತು.

ಅದೇನೇಯಾದರೂ ಯಾವುದೇ ಚಳವಳಿ ಯಾದರೂ, ಪ್ರಶ್ನೆ ಇರುವುದು ಅದನ್ನು ಉಳಿಸಿ ಕೊಂಡು ಹೋಗುವಲ್ಲಿ. ಅಂತಿಮವಾಗಿ ಅದು ಸರ್ಕಾರದಿಂದ ಬೇರ್ಪಟ್ಟು, ಅದಕ್ಕೆ ಸವಾಲಾಗ ಬೇಕು. ದುರದೃಷ್ಟವೆಂದರೆ ಇಂತಹ ಹಂತದಲ್ಲಿ ಸರ್ಕಾರ ಚಳವಳಿಯನ್ನು ಬಗ್ಗು ಬಡಿಯುತ್ತದೆ ಇಲ್ಲವೇ ವಶಪಡಿಸಿಕೊಳ್ಳುತ್ತದೆ. ಈಗಾಗಲೇ ಆಂಧ್ರ ಪ್ರದೇಶದ ಮುಖ್ಯಮಂತ್ರಿಗಳು ಸಾಕ್ಷರತಾ ಕಾರ್ಯಕ್ರಮ, ಕಲಿಯುವವರಲ್ಲಿ ಸರ್ಕಾರೀ ವಿರುದ್ಧದ ಭಾವನೆಗಳನ್ನು ಉತ್ತೇಜಿಸಿದ ರೀತಿಯ ಬಗ್ಗೆ ಸಿಟ್ಟಾಗಿದ್ದಾರೆ.

ಪ್ರ : ಹಾಗೇಯೇ, ವಿದೇಶೀ ಹಣ ಸಹಾಯದಿಂದ ಅಭಿವೃದ್ಧಿಯಲ್ಲಿ ತೊಡಗಿಕೊಂಡಿರುವ ಸರ್ಕಾರೇತರ ಸಂಸ್ಥೆಗಳೆಡೆಗೆ (NGO's) ನಿಮ್ಮ ಅಭಿಪ್ರಾಯ ತಿಳಿಸಿ. ? ಮಹಿಳಾ ಚಳವಳಿಯಲ್ಲಿ ಇವರಿಗೆ ಪಾತ್ರ ವಿದೆಯೇ ?

ಉ : ಅನೇಕ ರೀತಿಯ NGO ಗಳಿವೆ. ಎಲ್ಲವನ್ನೂ ಸಾಮಾನ್ಯೀಕರಿಸಿ ಹೇಳುವುದು ಕಷ್ಟ. ಅದೇನೇ ಯಾದರೂ, ನಾನು ಇಂತಹ ಅಭಿವೃದ್ಧಿ ಗುಂಪು ಗಳು ಮತ್ತು ಸಾಮಾಜಿಕ-ರಾಜಕೀಯ ಚಳವಳಿಗಳ ನಡುವೆ ವ್ಯತ್ಯಾಸವನ್ನು ತರುತ್ತೇನೆ ಎಂದು ಹೇಳಲು ಇಷ್ಟಪಡುತ್ತೇನೆ. ವಿದೇಶೀ ಹಣ ಸಹಾಯ ಪಡೆಯುವ ಸಣ್ಣ ಗುಂಪುಗಳು ಮಹಿಳಾ ವಿಮೋಚನೆಯೆಡಗಿನ ಒಂದು ನಿರಂತರ ಚಳವಳಿಯ ತಳಹದಿಗಳಾಗಲು ಸಾಧ್ಯವಿಲ್ಲ. ಅಬ್ಬಬ್ಬಾ ಎಂದರೆ ಅವು ಬೆಂಬಲ ಅಂಗಗಳಾಗಿ ಕೆಲಸ ಮಾಡಬಹುದು, ಮಾಡುತ್ತಲೂ ಇವೆ. ಇದೇ ರೀತಿಯಲ್ಲಿ, ಹಣ ಕೊಡಿಸುವ ಪ್ರಶ್ನೆಯೇ ರಾಜಕೀಯಕ್ಕೆ ಸಂಬಂಧಿ ಸಿದ್ದು. ರಾಜಕೀಯ ಪ್ರಕ್ರಿಯೆಯಲ್ಲಿ ತುಂಬಾ ಮುಖ್ಯವಾದ ಹಣ ಸಂಗ್ರಹಣೆಯನ್ನು ವಿದೇಶೀ ಫಂಡುಗಳು ಸುಲಭಗೊಳಿಸಿಬಿಡುತ್ತವೆ. ಅದಕ್ಕಿರುವ ಪ್ರಾಮುಖ್ಯತೆಯನ್ನೇ ಮುಚ್ಚಿಹಾಕಿ ಬಿಡುತ್ತವೆ. ಫಂಡಿಗ್ ಸಂಸ್ಥೆಗಳು ಮತ್ತು ಮಹಿಳೆಯರ ಮಧ್ಯೆ ಕೊಂಡಿಗಳಾಗಿರುವ 'ಗಣ್ಯ ರನ್ನು ಇವು ಸೃಷ್ಟಿಸು ತ್ತವೆ. ಬಹಳಷ್ಟು ಸಂದರ್ಭಗಳಲ್ಲಿ ಫಂಡಿಂಗ್ ಏಜನ್ಸಿಗಳು 'ಆಶ್ರಯದಾತ'ರಂತಹ ದೃಷ್ಟಿಕೋನ ಗಳನ್ನು ಹೊಂದಿದ್ದು, ಹಳ್ಳಿಗಳಲ್ಲಿ ಇವರ ಇರುವಿಕೆ ತುಂಬಾ ಕೆಟ್ಟ ಪರಿಣಾಮವನ್ನು ಬೀರುವು ದುಂಟು. ಮಹಿಳಾ ಚಳವಳಿ ಈ ಫಂಡುಗಳ ಪರಿಣಾಮ ಮತ್ತು ಕಾರ್ಯ ರೀತಿಯನ್ನು ಅಧ್ಯ ಯಿಸಬೇಕೆಂದು ನನಗೆ ಬಲವಾಗಿ ಅನ್ನಿಸುತ್ತದೆ.

ಪ್ರ : ಈಗ ನೀವು ಹೆಚ್ಚು ಮಾನವ ಹಕ್ಕುಗಳ ಚಳವಳಿ ಯಲ್ಲಿ ತೊಡಗಿಸಿಕೊಂಡಿದ್ದೀರಿ. ಇದಕ್ಕೂ ಮಹಿಳಾ ಚಳವಳಿಗೂ ಹೇಗೆ ಸಂಬಂಧ ತರುವಿರಿ?

ಉ : ಮಹಿಳಾ ಚಳವಳಿಯಲ್ಲಿ ನನ್ನನ್ನು ತೊಡಗಿಸಿ ಕೊಂಡಿದ್ದರ ಫಲವಾಗಿಯೇ ನಾನು ಲಾ ಕೋರ್ಸಿಗೆ ಸೇರಿಕೊಂಡದ್ದು. ಪ್ರಾರಂಭದಲ್ಲಿ ನಾನು ವಿಚ್ಛೇದನ, ಕಸ್ಟಡಿ, ಪರಿಹಾರ ಮುಂತಾದ ಮುಖ್ಯವಾಗಿ ಮಹಿಳಾ ಕೇಸುಗಳನ್ನೇ ವ್ಯಾಪಕ ವಾಗಿ ತೆಗೆದುಕೊಳ್ಳುತ್ತಿದ್ದೆ. ಆದರೆ ಹೆಚ್ಚು ಕೇಸು ಗಳನ್ನು ಎತ್ತಿಕೊಳ್ಳುವುದರಿಂದ ಚಳವಳಿ ವಿಸ್ತಾರ ಗೊಳ್ಳುವುದಿಲ್ಲ ಎಂದು ನನಗನ್ನಿಸಿತು. ನಾವು ಯಾವ ಮಹಿಳೆಯರನ್ನು ತಲುಪಿದ್ದೇವೋ ಅವರು ಚಳವಳಿಯನ್ನೂ ಭದ್ರಪಡಿಸುವರೆಂದು ನಂಬಿ ದ್ದೆವು. ಆದರೆ ಕೇವಲ ಒಂದು ಕೇಸಿಗಾಗಿ ನಾವು ನಮ್ಮ ತುಂಬಾ ಸಮಯ-ಶ್ರಮಗಳನ್ನು ವ್ಯಯಿಸು ತ್ತಿದ್ದೇವೆ ಎಂಬುದನ್ನು ಕಂಡುಕೊಂಡೆವು. ಇದರಿಂದ ನಮ್ಮ ಆಂದೋಲನದ ಕೆಲಸಕ್ಕೆ ತುಂಬಾ ದಕ್ಕೆಯುಂಟಾಗುತ್ತಿತ್ತು. ವ್ಯಕ್ತಿಗತ ಕೇಸುಗಳನ್ನು ತೆಗೆದುಕೊಳ್ಳುವುದು ಮುಖ್ಯ ಆದರೆ ಇತರ ರಾಜಕೀಯ ಸಮಸ್ಯೆಗಳಿಗೂ ಗಮನ ಕೊಡುವುದು ಅಷ್ಟೇ ಮುಖ್ಯ.

ಈ ರೀತಿಯಲ್ಲಿ ನಾನು ಮಾನವ ಹಕ್ಕುಗಳ ಚಳವಳಿ ಯೆಡೆಗೆ ಸರಿದೆ ಮತ್ತು ಕಳೆದ ಹತ್ತು ವರ್ಷಗಳಿಂದ ಪೂರ್ಣಾವಧಿಯ ಮಾನವ ಹಕ್ಕುಗಳ ವಕೀಲಳಾಗಿ ಕೆಲಸ ಮಾಡುತ್ತಿದ್ದೇನೆ. ನಾನು ಇಲ್ಲಿ ತುಂಬಾ ಕಲಿತಿದ್ದೇನೆ ಮತ್ತು ಇಲ್ಲಿನ ಅನುಭವ ತುಂಬಾ ತುಂಬಾ ಶ್ರೀಮಂತ. ಆದರೆ ಒಬ್ಬ ಸ್ತ್ರೀವಾದಿಯಾಗಿ, ನಾನು ಚಳವಳಿಯಲ್ಲಿ ಒಬ್ಬಂಟಿ ಅನಿಸುತ್ತದೆ. ಇದಕ್ಕೆ ಕಾರಣ ಮಾನವ ಹಕ್ಕುಗಳ ಚಳವಳಿ ಸ್ತ್ರೀ ವಾದೀ ದೃಷ್ಟಿಕೋನವನ್ನು ಏಕೀಭವಿಸಿಕೊಂಡಿಲ್ಲ. ಲಿಂಗ ದಮನ ಮತ್ತು ಇದನ್ನು ಮುಂದುವರಿಸುವಲ್ಲಿ

ರಾಜ್ಯಾಂಗದ ಪಾತ್ರ ಇತ್ಯಾದಿಗಳ ಮೇಲೆ ಅವರು ಬೆಳಕು ಚೆಲ್ಲಿಲ್ಲ.

ಭಾರತದಲ್ಲಿ ಮಾನವ ಹಕ್ಕುಗಳ ಚಳವಳಿ ಜಗತ್ತಿನ ಇನ್ಯಾವುದೇ ಭಾಗದಲ್ಲಿಯಂತೆ, ರಾಜ್ಯಾಂಗ ಮಾನವ ಹಕ್ಕುಗಳ ಉಲ್ಲಂಘಿಸುವುದು ಮತ್ತು ವಿಶೇಷವಾಗಿ ರಾಜ್ಯಾಂಗದ ಹಿಂಸೆಯೆಡೆಗೆ ತನ್ನ ಕಳಕಳಿ ಹೊಂದಿದೆ. ಪೋಲೀಸ್ ಮತ್ತು ಸಶಸ್ತ್ರ ಪಡೆಗಳೇ ಮುಂತಾದ ಕಾನೂನು ಹೇರಿಕೆಯ ಏಜೆಂಟರಿಂದ ಉಂಟಾದ ಕ್ರೂರ ಕೊಲೆಗಳನ್ನು ಅದು ಬಯಲಿಗೆಳೆದಿದೆ. ಆಂಧ್ರದಲ್ಲಿ ಪೋಲೀಸರು ಸಾವಿರಾರು ಬಡಜನರನ್ನು ತಣ್ಣಗೆ ಕೊಂದು ಕೊನೆಗದನ್ನು "Encounter death" ಎಂದು ಕರೆದದ್ದನ್ನು ನಾವು ನಮ್ಮ ಸತ್ಯಾಂಶ ಶೋಧಕ ವರದಿಗಳ ಮೂಲಕ ಸಾಬೀತುಗೊಳಿಸಿದ್ದೇವೆ. ಪೊಲೀಸು ಕಸ್ಟಡಿಯಲ್ಲಿ ಉಂಟಾದ ಸಾವಿರಾರು ಸಾವುಗಳನ್ನು ಆಂಧ್ರಪ್ರದೇಶ ಸಿವಿಲ್ ಲಿಬರ್‌ಟೀಸ್ ಕಮಿಟಿ ವ್ಯವಸ್ಥಿತವಾಗಿ ದಾಖಲುಗೊಳಿಸಿದೆ. ಮಾನವ ಹಕ್ಕುಗಳಿಗಾಗಿ ನಾಗ ಜನರ ಚಳವಳಿ, ಸಶಸ್ತ್ರ ಪಡೆಗಳಿಂದ ಮಾನವ ಹಕ್ಕುಗಳ ಉಲ್ಲಂಘನೆಯನ್ನು ಬಯಲುಗೊಳಿಸುತ್ತಾ ಬಂದಿದೆ.

ಕಳೆದ ಹದಿನೈದು ವರ್ಷಗಳ ಈ ಕೆಲಸ, ಈ ಸಮಸ್ಯೆಗಳೆಡೆಗೆ ಕೊಂಚ ಪ್ರಜ್ಞೆಯನ್ನು ಬೆಳೆಸಿದೆ. ಆದೇನೇಯಾದರೂ, ಆನೇಕ ಸಮಯಗಳಲ್ಲಿ ಮಹಿಳೆಯರ ಮೇಲಿನ ರಾಜ್ಯಾಂಗದ ನಿಗ್ರಹ ಮತ್ತು ಲಿಂಗ ಹಿಂಸಾಚಾರವನ್ನು ಬೆಳೆಸುವಲ್ಲಿ ರಾಜ್ಯಾಂಗದ ಪಾತ್ರ ಮುಂತಾದ ನಿರ್ದಿಷ್ಟ ಅಂಶಗಳೆಡೆಗೆ ಬೆಳಕು ಚೆಲ್ಲಲಾಗಿಲ್ಲ. The people Union for domacratic rights ಅತ್ಯಾಚಾರ ಮತ್ತು ರಾಜ್ಯಾಂಗವನ್ನು ಕುರಿತ ಕರಪುಸ್ತಿಕೆಯೊಂದನ್ನು ಹೊರತಂದಿತು. ಪ್ರಜಾತಂತ್ರ ಹಕ್ಕುಗಳ ಸಂಘಟನೆ, ನಿರ್ದಿಷ್ಟವಾಗಿ ಮಹಿಳೆಯರ ಸಮಸ್ಯೆಯನ್ನು ಕೈಗೆತ್ತಿಕೊಂಡ ಕೆಲವೇ ಉದಾಹರಣೆಗಳಲ್ಲಿ ಇದು ಒಂದು.

ಪ್ರ : ಸ್ತ್ರೀವಾದಿಯಾಗಿ ನೀವು ಕಾನೂನು ಮತ್ತು ಸಂವಿಧಾನವನ್ನು ವಿಶ್ಲೇಷಿಸುವ ರೀತಿಗೆ ಒಂದು ವೈಶಿಷ್ಟ್ಯ ಇದೆ. ನಿಮ್ಮ ಪುಸ್ತಕ Demystification of law (ಕಾನೂನಿನ ಅಮಿಥ್ಯೀಕರಣ) ಬಗ್ಗೆ ಮಾತನಾಡುತ್ತದೆ. ಏನು ಹಾಗೆಂದರೆ ಎಂದು ವಿವರಿಸುವಿರಾ ?

ಉ : ಕಾನೂನಿನ ಭಾಷೆ ಸಂಸ್ಕೃತದಂತದ್ದು. ಹಿಂದಿನ ಕಾಲದಲ್ಲಿ ಬ್ರಾಹ್ಮಣರು ಮಾತ್ರ ಸಂಸ್ಕೃತ ಕಲಿಯಬಹುದಾಗಿತ್ತು ಮತ್ತು ಆ ಮೂಲಕ ಅವರಿಗೆ ಮಾತ್ರ ಕೆಲವು ಜ್ಞಾನಗಳನ್ನು ಕಲಿಯುವುದು ಸಾಧ್ಯವಿತ್ತು. ತಮ್ಮ ಹಿತಾಸಕ್ತಿಗಾಗಿ ಸಾಮಾನ್ಯ ಜನ ತಮ್ಮ ತುಳಿತಗಳ ಕಾರಣವನ್ನು ಕಂಡುಕೊಳ್ಳುವುದು ಅವರಿಗೆ ಬೇಕಾಗಿರಲಿಲ್ಲ. ಅವರು ಧರ್ಮವನ್ನು ಸಂಕೀರ್ಣಗೊಳಿಸಿ ತನ್ಮೂಲಕ ತಮ್ಮ ಹಿಡಿತವನ್ನು ಸ್ಥಾಪಿಸಲಿಕ್ಕಾಗಿ ವಿಧಿಗಳನ್ನು – ಆಚರಣೆಗಳನ್ನು ಬಳಸುತ್ತಿದ್ದರು. ಅನೇಕ ರೀತಿಗಳಲ್ಲಿ ವಕೀಲರು ಇಂದಿನ ಬ್ರಾಹ್ಮಣರು. ಮತ್ತು ಕಾನೂನಿನ ಭಾಷೆ ಸಂಸ್ಕೃತ. ಇದು ತನ್ನ ತುಂಬಾ ವಿಸ್ಮಯಗಳನ್ನು, ಭಯ-ಭಕ್ತಿಗಳನ್ನು ತುಂಬಿಕೊಂಡಿದೆ.

ಭಕ್ತಿ ಚಳವಳಿಯ ಸಮಯದಲ್ಲಿ ಇಡೀ ಸಂಸ್ಕೃತಿಗೆ ಸವಾಲೆಸೆದಿದ್ದು ಸಾಧಾರಣ ಕಸಬುದಾರರ ವರ್ಗ. ಭಕ್ತಿ ಚಳವಳಿಯ ಸಂತರು ಮತ್ತು ಕವಿಗಳು ಬಡವರ ಭಾಷೆಯಲ್ಲಿ ಮಾತನಾಡಿದರು ಮತ್ತು ಅವರು ಧರ್ಮವನ್ನು ಸರಳೀಕರಿಸಿದರು. ಇವರನ್ನೆಲ್ಲಾ ರಾಜ್ಯಾಂಗಕ್ಕೆ ಬೆದರಿಕೆಯಂತೆ ನೋಡಲಾಯಿತು. ಇವರನ್ನು ಸೆರೆಹಿಡಿದು, ಶಿಕ್ಷಿಸಿ, ಕೊಲ್ಲಲಾಯಿತು.

ಸ್ತ್ರೀವಾದೀ ಮತ್ತು ಮಾನವ ಹಕ್ಕುಗಳ ವಕೀಲರ ಮುಂದಿರುವ ಕೆಲಸವೆಂದರೆ, ಕಾನೂನಿನ ಭಾಷೆಯನ್ನು ಸಾಮಾನ್ಯ ಜನಕ್ಕೆ ಅರ್ಥವಾಗುವಂತೆ ಮಾಡಿ, ಅದರಲ್ಲಿನ ಕಾಪಟ್ಯವನ್ನು ಬಯಲಿಗೆಳೆಯಬೇಕಾದುದು. ಹೀಗೆ ಮಾಡುವುದರ ಮೂಲಕ ನ್ಯಾಯವನ್ನು ಒದಗಿಸಬೇಕಾದ ಕಾನೂನು ವ್ಯವಸ್ಥೆಯು ಹೇಗೆ ಮಹಿಳೆಯರ, ದಲಿತರ, ಅಲ್ಪಸಂಖ್ಯಾತರ ಮೇಲಿನ ದಮನವನ್ನು ಮತ್ತು ಭೂರಹಿತರ, ಆದಿವಾಸಿಗಳ ಮತ್ತು ಕೂಲಿಕಾರರ ಮೇಲಿನ ಶೋಷಣೆಯನ್ನು ಸ್ಥಿರಗೊಳಿಸುತ್ತದೆ ಎಂಬುದನ್ನು ವಿವರಿಸಬೇಕಾಗಿದೆ.

ಪ್ರ : ಲಿಂಗ, ವರ್ಗ, ಜಾತಿ, ದಮನಗಳ ನಡುವೆ ಕೊಂಡಿ

ಯಿರಬೇಕಾದ್ದನ್ನು ನೀವು ಒತ್ತಿ ಹೇಳಿದ್ದೀರಿ. ಆದರೆ ನಿಮ್ಮ ಪುಸ್ತಕ Demystification of law for Womenದಲ್ಲಿ ನೀವು ಬರೀ ಲಿಂಗ ದಮನಕ್ಕೆ ಮಾತ್ರ ಗಮನ ಹರಿಸಿದ್ದೀರಿ. ಅದೇಕೆ?

ಉ : ನೀವು ಈ ಪ್ರಶ್ನೆ ಕೇಳಿದ್ದು ನನಗೆ ತುಂಬಾ ಸಂತೋಷ. ನೀವು ಹೇಳಿದ್ದು ನಿಜ. ನಾನು ಲಿಂಗ ದಮನವನ್ನು ಜಾತಿ ಮತ್ತು ವರ್ಗಗಳಿಗೆ ಸಂಬಂಧ ತಂದು ಹೇಳಿಲ್ಲ ನನ್ನ ಪುಸ್ತಕದಲ್ಲಿ. ಆ ಪುಸ್ತಕ ಬರೆಯುವಾಗ ಕೂಡ ನನಗೆ ಈ ಕೊರತೆಯ ಅರಿವು ಇತ್ತು. ಜಾತಿಯ ಪ್ರಶ್ನೆಗೆ ಸಂಬಂಧಿಸಿದಂತೆ ಆ ಸಮಯದಲ್ಲಿ ನಾನು ಅದನ್ನು ನಿರ್ವಹಿಸಲು ಸಮರ್ಥಳು ಎಂದು ಅನ್ನಿಸಿರಲಿಲ್ಲ. ವರ್ಗ ಶೋಷಣೆಯೊಟ್ಟಿಗೆ ಸಂಬಂಧಿಸಬೇಕೆಂದು ಪ್ರಯತ್ನಿಸಿದೆ. ಆದರೆ ಪುಸ್ತಕವನ್ನು Uniform Civil code ಬಗ್ಗೆ ಚರ್ಚೆ ನಡೆದಿದ್ದಾಗ ಬರೆದದ್ದರಿಂದ ಪುಸ್ತಕ ತುಂಬಾ ದೀರ್ಘವಾಗುತ್ತದೆಯೆನಿಸಿತು. ಏಕೆಂದರೆ ನನ್ನ ಪುಸ್ತಕ ಆ ಚರ್ಚೆಯೊಳಗೆ ಮಧ್ಯ ಪ್ರವೇಶ ಪಡೆಯಬೇಕಾಗಿತ್ತು. ವರ್ಗ-ಜಾತಿಗಳ ನಡುವೆ ಲಿಂಗ ಸಮಸ್ಯೆಯ ಬೆಸುಗೆ ತರುವ ರೀತಿಯಲ್ಲಿ ನಾನು ಆ ಪುಸ್ತಕವನ್ನು ಪುನರ್ರಚಿಸಲು ಇಷ್ಟಪಡುತ್ತೇನೆ.

ಪ್ರ : ಕೊಂಚ ವೈಯಕ್ತಿಕವೆನಿಸುವ ಪ್ರಶ್ನೆ! ತಾಯ್ತನದ ಬಗ್ಗೆ ನಿಮ್ಮ ಅಭಿಪ್ರಾಯವೇನು ?

ಉ : ತಾಯಿಯಾಗುವ ಕ್ರಿಯೆ ನಿಜವಾಗಿಯೂ ಒಂದು ಇತ್ಯಾತ್ಮಕವಾದ, ಸೃಜನಶೀಲವಾದ ಕ್ರಿಯೆ, ಅದು ಮಹಿಳೆ ಮತ್ತು ಆಕೆಯ ಸಂಗಾತಿಯನ್ನು ನಿಕಟಗೊಳಿಸಿ, ಅವರ ನಡುವಿನ ಪ್ರೀತಿಯನ್ನು ಆಳಗೊಳಿಸಬಹುದು. ಬದುಕನ್ನು ಸ್ಥಿರೀಕರಿಸುವ ಸುಂದರ ರೀತಿ ಇದಾಗಬಹುದು.

ಅದೇನೇಯಾದರೂ ತಾಯ್ತನದ ಸಿದ್ಧಾಂತ ಮಹಿಳೆಯನ್ನು ದಮನಗೊಳಿಸುವ ಅವರನ್ನು ಮನೆಗಳಿಗೆ ಕಟ್ಟಿಹಾಕುವ ಮತ್ತು ದಮನಕಾರೀ ಪಿತೃಪ್ರಧಾನ ಕೌಟುಂಬಿಕ ವ್ಯವಹಾರಗಳಿಗೆ ದಾಸಗೊಳಿಸುವ ರೀತಿಯಾಗಿ ಬಂದುಬಿಟ್ಟಿದೆ. ಇದು ಗಂಡ-ಹೆಂಡತಿಯ ನಡುವೆ ಪ್ರಕ್ಷುಬ್ಧತೆಯನ್ನು ತಂದಿದೆ, ವಿಶೇಷವಾಗಿ ಮಹಿಳೆಯರು ಆಸ್ತಿಯ 'ಹಕ್ಕುದಾರ'ನನ್ನು ಹೆತ್ತುಕೊಡಬೇಕಾದ ಸಂದರ್ಭಗಳಲ್ಲಿ. ಅನೇಕ ವ್ಯಕ್ತಿಗಳು ಮತ್ತು ಕುಟುಂಬಗಳು ಮಕ್ಕಳನ್ನು ಬಯಸುವುದು, ಮಕ್ಕಳನ್ನು ಪಡೆಯುವ ಹರ್ಷಕ್ಕಾಗಿ ಅಲ್ಲ, ವಂಶ ಬೆಳೆಯುಲಿಕ್ಕಾಗಿ ಅಥವಾ ತಮ್ಮ ಭದ್ರತೆಗಾಗಿ.

ಬಹಳಷ್ಟು ಸಮಯಗಳಲ್ಲಿ ಮಹಿಳೆಯರೂ ಈ ಸಿದ್ಧಾಂತವನ್ನು ತುಂಬಾ ವ್ಯವಸ್ಥಿತವಾಗಿ ಅಂತರಿಕಗೊಳಿಸಿಕೊಂಡು ತಮ್ಮ ಮತ್ತು ಇತರ ಮಹಿಳೆಯರ ತುಳಿತಕ್ಕೆ ಕಾರಣವಾಗುತ್ತಾರೆ. ಇದು ದುಃಖಕರ ಸಂಗತಿ.

ನಮ್ಮ ಸಮಾಜದಲ್ಲಿ ಅನೇಕ ಮಹಿಳೆಯರು ತಾಯ್ತನದ ದಮನಕಾರೀ ಸ್ವರೂಪಗಳ ಕಾರಣಕ್ಕಾಗಿ ಮಕ್ಕಳು ಪಡೆಯದೇ ಇರುವ ತೀರ್ಮಾನವನ್ನು ತಾವೇ ಒತ್ತಾಯಿಸಿ ಕೈಗೊಂಡಿದ್ದಾರೆ.

ಪ್ರ : ನಂದಿತಾ, ನಿಮ್ಮನ್ನು ಕೊನೆಯದಾಗಿ ಕೇಳಬಯಸುವ ವಿಶೇಷ ಕಳಕಳಿಯ ಪ್ರಶ್ನೆ. ಕೋಮುವಾದೀ ವಿರುದ್ಧದ ಹೋರಾಟದಲ್ಲಿ ಮಹಿಳೆಯರ ಪಾತ್ರ ಏನು? ನಾವು ಹೇಗೆ ಒಂದು ಕೋಮುವಾದೀ ವಿರುದ್ಧದ ಶಕ್ತಿಯಾಗಿ ಬೆಳೆಯಬಹುದು.

ಉ : ಒಂದು ಶಕ್ತಿಶಾಲೀ, ನಿರಂತರತೆ ಉಳಿಸಿಕೊಂಡ ಮಹಿಳಾ ಚಳವಳಿ, ಕೋಮುವಾದಕ್ಕೆ ನಿಜವಾದ ಸವಾಲೆಸೆಯುವಲ್ಲಿ ಬಹುದೂರ ಹೋಗಬಲ್ಲದು ಎಂದು ಹೇಳುವ ಮೂಲಕ ನಾನು ಪ್ರಾರಂಭಿಸುತ್ತೇನೆ. ಅದೇನೇಯಾದರೂ, ಪ್ರಸ್ತುತದಲ್ಲಿ ಕೋಮುವಾದೀ ಮತ್ತು ಮೂಲಭೂತವಾದೀ ಶಕ್ತಿಗಳು ಲಕ್ಷೋಪಲಕ್ಷ ಮಹಿಳೆಯರನ್ನೂ ಸಂಘಟಿಸುವಲ್ಲಿ ಹೇಗೆ ಯಶಸ್ವಿಯಾಗಿವೆ ಎಂಬುದನ್ನೂ ನಾವು ಇಲ್ಲಿಯೂ, ಬೇರೆಲ್ಲಿಯೂ ನೋಡಬಹುದು. ಈ ಅಂಶವನ್ನು ನಾವು ಗಮನಕ್ಕೆ ತಂದುಕೊಂಡು ಅದನ್ನು ಎಚ್ಚರಿಕೆಯಿಂದ ಎದುರಿಸ ಹೊರಡಬೇಕು. ನಾವು ಗಮನಿಸಬೇಕಾದ ಎರಡನೇ ಅಂಶವೆಂದರೆ, ಸ್ವಾಯತ್ತ ಮಹಿಳಾ ಚಳವಳಿಯು ಮುಸ್ಲಿಂ ಮತ್ತು ಕ್ರೈಸ್ತ ಮಹಿಳೆಯರ ಭಾವನೆಗಳಿಗೆ ಅಷ್ಟಾಗಿ ಸ್ಪಂದಿಸಿಲ್ಲ ಎನ್ನುವುದು. ಮುಸ್ಲಿಂ

ಮತ್ತು ಕ್ರೈಸ್ತ ಮಹಿಳೆಯರು ಎದುರಿಸುವ ವಿಶೇಷ ಸಮಸ್ಯೆಗಳನ್ನು ನಾವು ಅಷ್ಟಾಗಿ ಅರ್ಥ ಮಾಡಿಕೊಂಡಿಲ್ಲ.

ಕೋಮುವಾದೀ ಸಿದ್ಧಾಂತದ ಮಹಿಳಾ ವಿರೋಧೀ ನೀತಿಗಳನ್ನು ಬಯಲಿಗೆಳೆಯಬೇಕಾದುದು ನಮ್ಮ ಕೆಲಸ.ವಿಶ್ವ ಹಿಂದೂ ಪರಿಷತ್ತು, ಆರ್.ಎಸ್.ಎಸ್. ಬಜರಂಗದಳ ಮುಂತಾದ ಹಿಂದೂ ಕೋಮುವಾದೀ ಸಂಘಟನೆಗಳು ತುಂಬಾ ಅಧಿಕಾರಯುಕ್ತ, ಶ್ರೇಣೀಕೃತ ಮತ್ತು ದಮನಕಾರೀ ಸ್ವರೂಪದ್ದವು. ಇತ್ತೀಚಿನ ಒಂದು ಹಿಂದೂ ಕೋಮುವಾದೀ ಕರಪುಸ್ತಿಕೆಯಲ್ಲಿನ ಹೇಳಿಕೆಯನ್ನು ನಾನಿಲ್ಲಿ ಕೊಡ ಬಯಸುತ್ತೇನೆ. ಇದರ ಶೀರ್ಷಿಕೆ "ಆರ್.ಎಸ್.ಎಸ್ ಸದಸ್ಯರಿಗೆ ಸ್ಥಳೀಯ ನಾಯಕರಿಂದ ಕರೆ." ಈ ಕರೆಗಳು ಬಂದು ಹೀಗೆ ಹೇಳುತ್ತದೆ : "ಮುಸ್ಲಿಂ ಮನೆಗಳಲ್ಲಿ ಕೆಲಸದಲ್ಲಿ ನಿರತರಾಗಿರುವ ಸಂದರ್ಭದಲ್ಲಿ, ಮುಸ್ಲಿಂ ಹೆಂಗಸರಿಗೆ ನಿಮ್ಮ ಗುಪ್ತಾಂಗಗಳನ್ನು ತೋರಿಸಲು ಪ್ರಯತ್ನಿಸಿ, ಅವರಿಗೆ ನಿಮ್ಮಲ್ಲಿ ಆಸಕ್ತಿ ಹುಟ್ಟುವಂತೆ ಮಾಡಿ ಮತ್ತು ಅವರನ್ನು ಸಂಭೋಗಿಸಲು ಪ್ರಯತ್ನಿಸಿ, ಮುಸ್ಲಿಂ ಹೆಂಗಸರ ಗರ್ಭದಲ್ಲಿ ಹಿಂದೂ ಪಿಂಡವನ್ನು ಬೆಳೆಸಲು ಇದು ಒಂದು ದಾರಿ". ಇದು ಅವರ ಸಿದ್ಧಾಂತದ ಒರಟುತನ ಮತ್ತು ಅಗ್ಗದ ಮಟ್ಟ ! ಇದೇ ಎಲ್ಲಾ ಕೋಮುವಾದೀ ಸಂಘಟನೆಗಳ ಸಿದ್ಧಾಂತ ಕೂಡ. ನಾವದನ್ನು ವ್ಯವಸ್ಥಿತವಾಗಿ ಬಯಲುಮಾಡಬೇಕು.

ಮಹಿಳಾ ಚಳವಳಿ ಈ ಗುಂಪುಗಳ ಮಹಿಳಾ-ವಿರೋಧೀ ಸಿದ್ಧಾಂತವನ್ನು ವ್ಯವಸ್ಥಿತವಾಗಿ ಬಯಲು ಮಾಡಿಲ್ಲ.

ಕೊನೆಯದಾಗಿ, ನಾವು ಧರ್ಮದ ಎರಡು ಆಯಾಮಗಳನ್ನೂ ನೋಡಬೇಕು. ಧರ್ಮವು ಮಹಿಳೆಯರ ದಮನದ ತುಂಬಾ ಮುಖ್ಯ ನೆಲೆಯಾಗಿದೆ. ಆದರೆ ಅದೇ ಸಮಯದಲ್ಲಿ ಅದು ವಿಮೋಚನಾ ಸ್ವರೂಪೀ ಕೂಡ. ಭಕ್ತಿ ಚಳವಳಿ ಈ ಎರಡನೆಯದಕ್ಕೆ ಸಾಕ್ಷಿ. ರಾಜಸ್ಥಾನದಲ್ಲಿನ ಮೀರಾಬಾಯಿ ಕಾಶ್ಮೀರದಲ್ಲಿನ ಲಾಲ್‌ದೇಡ್ ಇವರು ಧರ್ಮ ಹೇಗ ನಮಗೆ ವಿಮೋಚನಾ ಸಾಧನವಾಗಬಹುದೆಂಬುದರ ಉದಾಹರಣೆಯಾಗುತ್ತಾರೆ. ಇತ್ತೀಚಿನ ದಿನಗಳಲ್ಲಿ, ಕ್ರಿಶ್ಚಿಯನ್ ಫೆಮಿನಿಸ್ಟರು ತಮ್ಮದೇ ವಿಮೋಚನಾತ್ಮಕ ಥಿಯಾಲಜಿಯನ್ನು ಹುಟ್ಟಿಹಾಕುವಲ್ಲಿ ಗಮನಾರ್ಹ ಪ್ರಯತ್ನ ನಡೆಸಿದ್ದಾರೆ. ಹಾಗೆಯೇ ಮುಸ್ಲಿಂ ಮಹಿಳೆಯರು ಸ್ತ್ರೀವಾದಿ ದೃಷ್ಟಿಕೋನದಿಂದ ಇಸ್ಲಾಂ ಧರ್ಮವನ್ನು ಪುನರ್ ಅಭಿವ್ಯಕ್ತಿಸಲು ಪ್ರಾರಂಭಿಸಿದ್ದಾರೆ. ಇದರಲ್ಲಿ ತುಂಬಾ ಮುಖ್ಯವಾದುದೆಂದರೆ "ಮುಸ್ಲಿಂ ಕಾನೂನಿನಡಿ ಬದುಕುವ ಮಹಿಳೆಯರು". ದುರದೃಷ್ಟವೆಂದರೆ, ಹಿಂದೂ ಮಹಿಳೆಯರು ಇಂತಹದ್ದನ್ನು ಪ್ರಾರಂಭಿಸಿಲ್ಲ. ಹಿಂದೂ ಧರ್ಮಶಾಸ್ತ್ರಗಳನ್ನೂ ಸ್ತ್ರೀವಾದೀ ದೃಷ್ಟಿಕೋನದಿಂದ ಪುನರ್ ಪರಿಶೀಲನೆ ಮಾಡಬೇಕಾಗಿರುವುದು ತೀರಾ ಮುಖ್ಯ. ನಮಗೆ ಮಹಿಳಾ ಬೈಬಲ್ಲು ಮಹಿಳಾ ಕುರಾನ್‌ಗಳಂತೆ ಮಹಿಳಾ 'ಗೀತೆ' ಬೇಕು.

ಕೊನೆಯಲ್ಲಿ ನಾನು ಹೇಳಬಯಸುವದೆಂದರೆ, ಭಯಂಕರವಾಗಿ ಬೆಳೆಯುತ್ತಿರುವ ಕೋಮುವಾದೀ ಪ್ರವಾಹವನ್ನು ಮೆಟ್ಟಿ ನಿಲ್ಲುವುದು ಹೇಗೆ ಎನ್ನುವುದೇ ಇಂದು ಭಾರತದಲ್ಲಿ ಸ್ತ್ರೀವಾದೀ ಚಳವಳಿಯ ಮುಂದಿರುವ ಅತಿ ದೊಡ್ಡ ಸವಾಲು. ●



# ಬಿ. ಜಯಶ್ರೀಯವರ 'ಅಗ್ನಿಪಥ'

ಸಿನಿಮಾ, ಕತೆ, ಕಾದಂಬರಿ, ಕಾವ್ಯ ಮುಂತಾದ ಕ್ಷೇತ್ರಗಳಲ್ಲಿ ಸ್ತ್ರೀಯರ ಸಂವೇದನೆಯ ವಿವಿಧ ಆಯಾಮಗಳನ್ನು ಅಭಿವ್ಯಕ್ತಿಸುವ, ಗುರುತಿಸುವ, ಕ್ರಿಯೆಯನ್ನು ನಾವು ನೋಡಬಹುದು. ಈ ಕ್ಷೇತ್ರಗಳಲ್ಲಿ ಮಹಿಳೆಯರು ತಮ್ಮನ್ನು ತಾವು ಗುರುತಿಸಿಕೊಳ್ಳಲು ಹವಣಿಸುತ್ತಿದ್ದಾರೆ. ಆದರೆ ನಾಟಕ ಕ್ಷೇತ್ರದಲ್ಲಿ, ನಾಟಕದ ರಚನೆಯಲ್ಲಿ ಮಹಿಳೆಯರು ತಮ್ಮನ್ನು ತಾವು ತೊಡಗಿಸಿ ಕೊಂಡಿರುವುದು ತುಂಬಾ ವಿರಳ.

ಈ ಸಂದರ್ಭದಲ್ಲಿ ಇತ್ತೀಚೆಗೆ ಸ್ಪಂದನದವರು ಅರ್ಪಿಸಿದ, ಬಿ. ಜಯಶ್ರೀಯವರು ನಿರ್ದೇಶಿಸಿದ 'ಅಗ್ನಿಪಥ' ಒಂದು ಗಮನಾರ್ಹ ಪ್ರಯತ್ನವೆನ್ನಬಹುದು. ಬಿ. ಜಯಶ್ರೀಯವರು ತಮ್ಮ ನಾಟಕ "ಲಕ್ಷಾಪತಿ ರಾಜನ ಕತೆ"ಯಿಂದ ಬಹಳಷ್ಟು ರಂಗ ಪ್ರಿಯರ ಗಮನವನ್ನು ಸೆಳೆದಿದ್ದರು. ನಾಟಕದ ವಸ್ತುವಿನ ಆಯ್ಕೆಯೊಂದಿಗೆ ಅಳವಡಿಸಿದ ಜಾನಪದ ಶೈಲಿ ನಾಟಕದ ಯಶಸ್ಸಿಗೆ ಕಾರಣವಾಗಿತ್ತು. ಕೆಲವೊಮ್ಮೆ ತಂತ್ರ ನಾಟಕದ 'ಕತೆ'ಯನ್ನೇ ಮರೆಸಿ ಬಿಡುವಷ್ಟು ಆಕರ್ಷಕವಾಗಿ ಬಿಡುವುದು ಒಂದು ದೃಷ್ಟಿಯಿಂದ ಜಯಶ್ರೀಯವರಿಗಿರುವ ಪ್ಲಸ್ ಪಾಯಿಂಟ್.

ಅಗ್ನಿಪಥದ ಕಥಾವಸ್ತು ಹೊಸದೇನಲ್ಲ. ಮಹಾಭಾರತದಲ್ಲಿ ಬರುವ ಸ್ತ್ರೀಪಾತ್ರಗಳನ್ನು ಪ್ರಸ್ತುತದ ಸಾಮಾಜಿಕ ಹಿನ್ನೆಲೆಯಲ್ಲಿ ವಿಶ್ಲೇಷಿಸುವುದು ನಾಟಕದ ಉದ್ದೇಶ. ಇತಿಹಾಸದಲ್ಲಿ ಹುಗಿದು ಹೋಗಿರುವ ಸ್ತ್ರೀಪಾತ್ರಗಳ ನೋವು, ಹತಾಶೆ, ಆಕ್ರೋಶಗಳನ್ನು ಇಂದಿನ ಸಾಮಾಜಿಕ ದೃಷ್ಟಿಕೋನದಿಂದ, ಅವರ ಮಾನಸಿಕ ತುಮುಲಗಳಿಗೆ ಅಭಿವ್ಯಕ್ತಿ ನೀಡುವ ಪ್ರಯತ್ನವಿದು.

ಭೀಷ್ಮನಿಂದ ಗೆದ್ದ ಕಾರಣಕ್ಕಾಗಿ ಪ್ರಿಯಕರನಿಂದ ತಿರಸ್ಕೃತವಾಗುವ ಅಂಬೆ, ಕುರುಡು ಗಂಡನನ್ನು ಮದುವೆಯಾದ ಕಾರಣಕ್ಕಾಗಿ ಒಳಗೆ ಕುದಿಯುವ ಸಿಟ್ಟಿನಿಂದ ಕಣ್ಣು ಕಟ್ಟಿಕೊಳ್ಳುವ ಗಾಂಧಾರಿ, ಪಗಡೆಯಾಟಕ್ಕೆ ದಾಳವಾಗುವ ದ್ರೌಪದಿ, ಒಂದಲ್ಲ ಒಂದು ಕಾರಣಕ್ಕೆ ನಿಂದನೆಗೊಳಗಾಗುವ ಕುಂತಿ, ಮಾದ್ರಿಯರ ಮಾನಸಿಕ ಸಂಘರ್ಷಗಳನ್ನು ನಾಟಕ ಹಿಡಿದಿಡಲು ಪ್ರಯತ್ನಿಸುತ್ತದೆ. ಈ ಪಾತ್ರಗಳು ತಮ್ಮ ಸುತ್ತ ಇರುವ ಪುರುಷ ನಿರ್ಮಿತ ಗೋಡೆಯನ್ನು ಭೇದಿಸಿ ತಮಗಾದ ಅನ್ಯಾಯದ ವಿರುದ್ಧ ತಮ್ಮದೇ ಮಿತಿಯಲ್ಲಿ ಪ್ರತಿಭಟಿಸುತ್ತವೆ.

ವಿವಿಧ ರೀತಿಯ ಶೋಷಣೆಗೊಳಗಾದ ಮಹಾಭಾರತದ ಐದು ಸ್ತ್ರೀಪಾತ್ರಗಳ ಕಲೆಯೊನ್ನಳಗೊಂಡ 'ಅಗ್ನಿಪಥ'ದ ಕಥೆಯ ವಸ್ತು "ಸಧ್ಯದ ಸಾಮಾಜಿಕ ನೆಲೆಯಲ್ಲಿ ಒರೆಹಚ್ಚಿ ನೋಡುವ ಹಾಗೂ ಆಗಿನ ಸಮಾಜದ ಕಟ್ಟು ಪಾಡುಗಳಿಗೆ ಒಳಗಾದ ಹೆಣ್ಣುಗಳ ಮಾನಸಿಕ ಸ್ಥಿತಿಯನ್ನು ಗುರುತಿಸುವ" ಉದ್ದೇಶ ನಾಟಕದ್ದಾದರೂ ನಾಟಕದ ಹಂದರ ವಸ್ತುವಿನ ಆಯ್ಕೆಯ ಹಂತದಲ್ಲಿ ಎಲ್ಲೋ ಬಿಡಿಬಿಡಿಯಾದಂತೆನಿಸುತ್ತದೆ. ಐದು ಪಾತ್ರಗಳ ಸುತ್ತ ಹೆಣೆದಿರುವ ಕಥಾವಸ್ತುವೇ ಇದಕ್ಕೆ ಪ್ರಮುಖ ಕಾರಣವಾಗಿದೆ.

ಆದರೆ ನಾಟಕದಲ್ಲಿ ಬಳಸಲಾದ ಜಾನಪದ ಶೈಲಿಯ ತಂತ್ರ ಈ ಕೊರತೆಯನ್ನು ತುಂಬುವಲ್ಲಿ ಹೆಚ್ಚು ಯಶಸ್ವಿಯಾಗಿದೆಯೆನ್ನಬಹುದು. ಉತ್ತರ ಕರ್ನಾಟಕದಲ್ಲಿ ಪ್ರಚಲಿತವಿದ್ದ ಗೊಂದಲಿಗರ ಜಾನಪದ ಶೈಲಿಯನ್ನು ಜಯಶ್ರೀಯವರು ಬಳಸಿಕೊಂಡಿರುವ ರೀತಿ ಕಥಾವಸ್ತುವನ್ನು ಮೀರುವಂತದು ಎಂಬುದನ್ನು ಪ್ರೇಕ್ಷಕರು ಗಮನಿಸಬಹುದು.

ನಾಟಕದಲ್ಲಿನ ಸಂಭಾಷಣೆಗಳು ಒಮ್ಮೊಮ್ಮೆ ಘೋಷಣೆಯಂತಾಗಿ, ಪಾತ್ರದ ಅಂತರಂಗವನ್ನು, ತಲುಪದೇ, ಮೆಲ್ಪದರಲ್ಲೇ ತೇಲುತಿದ್ದು, ನಾಟಕದ ರೂಪಕ್ಕೆ ಜಯಶ್ರೀ, ಹಾಗೂ ಎಂ. ಎಸ್. ವ್ಯಾಸರಾವ್ ಅವರು ಮತ್ತಷ್ಟು ಗಮನವನ್ನು ಕೊಟ್ಟಿದ್ದರೆ ಉತ್ತಮವಾಗಿರುತ್ತಿತ್ತು.

ಗಾಂಧಾರಿಯ ಮನಸ್ಸನ್ನು ಮತ್ತೊಂದು ಪಾತ್ರದ ಮೂಲಕ ಹಾಗೂ ನಾಟಕದಲ್ಲಿ ಅಗ್ನಿಯನ್ನು ಸಾಂಕೇತಿಕವಾಗಿ ಬಳಸಿಕೊಂಡ ರೀತಿ ಕಥಾವಸ್ತುವಿನ ಅರ್ಥವಂತಿಕೆಯನ್ನು ಹೆಚ್ಚಿಸುವುದರ ಜೊತೆಗೆ ನೆನಪಿನಲ್ಲಿ ಉಳಿಯುವ ದೃಶ್ಯ ಸಂಯೋಜನೆಗೆ ಪೂರಕವಾಗಿತ್ತು.

ಒಟ್ಟಾರೆಯಾಗಿ ಅಗ್ನಿಪಥ ಒಂದು 'ಗುರುತಿಸಬೇಕಾದ ಯಶಸ್ವಿ ಪ್ರಯೋಗವೆನ್ನಬಹುದು.

**ರಾಜೇಶ್ವರಿ ಹೆಚ್. ಎಸ್.**

# ಧರ್ಮ-ಕೋಮುವಾದ-ಕೋಮುಸೌಹಾರ್ದತೆಗಳ ಲಿಂಗಸ್ವರೂಪ

● ವಿ. ಗಾಯತ್ರಿ

ಹಲವು ದಶಕಗಳಿಂದಲೂ ನಮ್ಮಲ್ಲಿ ಕೋಮುವಾದ ಕುರಿತ ಚರ್ಚೆ—ವ್ಯಾಪಕವಾಗಿ ನಡೆಯುತ್ತಾ ಬಂದಿದೆ. ಇತ್ತೀಚಿನ ವಿನಾಶಕಾರೀ ಬೆಳವಣಿಗೆಗಳ ಹಿನ್ನೆಲೆಯಲ್ಲಿ ಅದಿನ್ನೂ ಹೆಚ್ಚು ತೀವ್ರಗೊಂಡು, ಕೋಮು ಸಾಮರಸ್ಯದ ಬಗ್ಗೆ ಕಳಕಳಿ ಹೆಚ್ಚುತ್ತಿದೆ. ಹಾಗೆ ನೋಡಿದರೆ, ಇಂದಿನ ಸನ್ನಿವೇಶದಲ್ಲಿ ಕೋಮುವಾದದಷ್ಟು ಸುದ್ದಿಯಲ್ಲಿರುವ ವಿಷಯ ಇನ್ನೊಂದಿಲ್ಲವೆಂದೇ ಹೇಳಬೇಕು (ಇಷ್ಟಿದ್ದೂ, ಸಂಘ ಪರಿವಾರದ ಹೇಯ ಧೋರಣೆ-ಕೃತ್ಯಗಳಿಗೆ ತಕ್ಕ ಪ್ರತಿರೋಧವನ್ನು ಹುಟ್ಟುಹಾಕುವಲ್ಲಿ ಇಲ್ಲಿನ ಪ್ರಯತ್ನ ಸಾಲದೇ ಹೋಗಿರುವುದು ಬೇರೆ ಸಂಗತಿ).

ಅದೇನೇಯಿದ್ದರೂ, ಒಂದು 'ಸಮುದಾಯ' ಎಂದು ಸಾಮಾನ್ಯೀಕರಿಸಿ ಹೇಳುವಾಗ ಅದಕ್ಕೆ ಒಂದು ಪ್ರತ್ಯೇಕವಾದ ಲಿಂಗಸ್ವರೂಪವಿರುವುದನ್ನು ಮರೆಯುವುದು ಹೇಗೆ ಸಾಧ್ಯವಿಲ್ಲವೋ ಹಾಗೆಯೇ ಕೋಮುವಾದ ಮತ್ತು ಕೋಮುಸಾಮರಸ್ಯದ ಬಗ್ಗೆ ಮಾತನಾಡುವಾಗ ಕೂಡ ಅದಕ್ಕೊಂದು ಲಿಂಗ ಸ್ವರೂಪ ಇರುತ್ತದೆಂಬುದನ್ನು ಮರೆಯಲು ಸಾಧ್ಯವಾಗುವುದಿಲ್ಲ, ಮತ್ತು ಅದನ್ನು ಗುರುತಿಸದ ಹೊರತು ಸ್ತ್ರೀಸಮುದಾಯ ಅದನ್ನು ಭಾವಿಸಿಕೊಳ್ಳಲು ಆಗುವುದಿಲ್ಲ. ಅಂತಹದನ್ನು ಗುರುತಿಸುವ ಪ್ರಯತ್ನವೇ ಇಲ್ಲಿನ ಲೇಖನ.

ಇಂದಿನ ಕೋಮುವಾದೀ ಶಕ್ತಿ ಮಹಿಳೆಯರ ಬಲವಾದ ಬೆಂಬಲವನ್ನು ಹೊಂದಿದೆ ಎಂದು ತೋರಿಸಲು ಪ್ರಯತ್ನಿಸಲಾಗುತ್ತಿದೆ. ಇದಕ್ಕೆ ಪೂರಕವೆಂಬಂತೆ ಬಾಬರಿ ಮಸೀದಿಯನ್ನು ಕೆಡುವಲು ಕಾರಸೇವಕರನ್ನು ಹುರಿದುಂಬಿಸುವಲ್ಲಿ ದೊಡ್ಡ ಪಾತ್ರವನ್ನು ವಹಿಸುವಂತಹ ಕಣ್ಣಿಗೆ ರಾಚುವ ಕ್ರಿಯೆಗಳಲ್ಲಿ ಮಹಿಳೆಯರು ಒಳಗೊಂಡಿದ್ದಾರೆ. ಅಲ್ಲದೆ ಕೋಮುವಾದೀ ಗುಂಪುಗಳು ತಮ್ಮಲ್ಲಿ ಮಹಿಳೆಯರ ಶಾಖೆಗಳನ್ನು ಸೃಷ್ಟಿಸಿಕೊಂಡು ವಿಶೇಷ ತರಬೇತಿಯ ಮೂಲಕ ಅವರನ್ನು 'ತಯಾರಿ' ಮಾಡುತ್ತಿವೆ. ಆದರ್ಶ ಸ್ತ್ರೀಯನ್ನು ಸೃಷ್ಟಿಸುತ್ತಿವೆ.

ಹತ್ತೊಂಬತ್ತನೇ ಶತಮಾನದೀಚೆಗೆ ಭಾರತದಲ್ಲಿ ನಿರ್ದಿಷ್ಟ ರಾಜಕೀಯ ಸನ್ನಿವೇಶಗಳಲ್ಲಿ ಇಂತಹ ಆದರ್ಶ ಸ್ತ್ರೀ ಮಾದರಿಗಳನ್ನು ಸೃಷ್ಟಿಸುವ ಕೆಲಸ ನಡೆದಿದೆ. ಹಾಗೆ ಗುರುತಿಸಬಹುದಾದ ಮಾದರಿಗಳಲ್ಲಿ ಸ್ಪಷ್ಟವಾದ ಎರಡನ್ನು ಇಲ್ಲಿನ ಚರ್ಚೆಗೆ ಎತ್ತಿಕೊಳ್ಳುತ್ತಿದ್ದೇನೆ. ಒಂದು 'ಭಾರತೀಯ ನಾರಿ'ಯ ಕಲ್ಪನೆ,ಎರಡು 'ಹಿಂದೂ ನಾರಿ'ಯ ಕಲ್ಪನೆ.

ಹತ್ತೊಂಬತ್ತನೇ ಶತಮಾನದ ಮೂರನೇ ದಶಕದ ವೇಳೆಗೆ 'ಭಾರತೀಯನಾರಿ'ಯ ಕಲ್ಪನೆ ಸೃಷ್ಟಿಗೊಳ್ಳಲು ಪ್ರಾರಂಭವಾಯಿತು. ಇಲ್ಲಿ ಪರಿಶುದ್ಧತೆ, ತ್ಯಾಗ, ಅಹಿಂಸೆ, ತಾಳ್ಮೆಗಳ ಮೂರ್ತಿಯಾದ ಸೀತೆ ಹೆಣ್ಣಿನ ಸಂಕೇತವಾದಳು. ಇಂತಹ ಆದರ್ಶಗಳಿಂದ ಕಡೆದು ರೂಪಿಸಲ್ಪಟ್ಟ ಹೆಣ್ಣು ದೇಶದ ಸಂಕೇತವಾದಳು. ಈ ಪ್ರಕ್ರಿಯೆ ಉಂಟಾಗಲು ಬಲವಾದ ಹಿನ್ನೆಲೆಯಿದೆ. ನಮ್ಮನ್ನು ಆಳುತ್ತಿದ್ದ ಬ್ರಿಟೀಷರಿಗೆ ಭಾರತೀಯರ ಬಗ್ಗೆ ಒಂದು ನಿಕೃಷ್ಟ ಭಾವನೆಯಿತ್ತು. ಇಲ್ಲಿನ ಹಿಂದೂಗಳು

ಅವ್ಯೆಚಾರಿಕರು, ಜಾತಿ-ಭೇದಗಳಲ್ಲಿ ಮುಳುಗಿ ಸಾಯು ತ್ತಿರುವವರು, ಕಲ್ಲು ದೇವರುಗಳನ್ನು, ಕಂಡ-ಕಂಡ ದೇವರುಗಳನ್ನು ಪೂಜಿಸುವವರು; ಮುಸಲ್ಮಾನರು ದುರ್ವ್ಯಸನಿಗಳು, ನಾಲ್ಕು ನಾಲ್ಕು ಹೆಂಡಿರನ್ನು ಮದುವೆ ಯಾಗುವವರು ಇತ್ಯಾದಿ (ಇರ್ಫನ್ ಹಬೀಬ್, FL, Jan 29, 93) ಇಂತಹ ಸಾಮ್ರಾಜ್ಯಶಾಹಿ ಮನಸ್ಸಿನ-ಶಕ್ತಿಯ ಎದುರಾಗಿ ಭಾರತೀಯ ಧರ್ಮ-ಸಂಸ್ಕೃತಿಗಳ ಉತ್ಕೃಷ್ಟತೆ ಯನ್ನು ಎತ್ತಿಹಿಡಿಯಬೇಕಾಗಿತ್ತು. ಅಂತಹ ಸನ್ನಿವೇಶ ದಲ್ಲಿ ತಾಯಿನಾಡಿನ ಉತ್ಕೃಷ್ಟತೆಯ ಸಂಕೇತವಾಗಿ 'ಪರಿ ಶುದ್ಧ ಹೆಣ್ಣು' ಮೂಡಿ ಬಂದಳು. ಹಿಂದೂ ಪುರಾಣ ಗಳಲ್ಲಿ ಮಡದಿಯ ಪರಿಶುದ್ಧತೆಗೆ ತಗುಲಿಕೊಂಡಿದ್ದ ಮೌಲ್ಯ ಈಗ ಮುಂದುವರೆದು ಸಮುದಾಯ ದೇಶಗಳಿಗೆ ವ್ಯಾಪಿಸಿತು. ಮುಂದೆ, ರಾಷ್ಟ್ರೀಯ ಚಳವಳಿಯಲ್ಲಿ ಗಾಂಧೀಜಿಯವರ ಉತ್ತೇಜನದಿಂದಾಗಿ ಮಹಿಳೆಯರಿಗೆ ಸಾರ್ವಜನಿಕ ಬದುಕಿನಲ್ಲಿ ಗಮನಾರ್ಹ ಸ್ಥಾನಮಾನಗಳು ದಕ್ಕತೊಡಗಿ ಅವರ ಬದುಕಿನ ಹೊಸ ಆಯಾಮಗಳು ತೆರೆದುಕೊಂಡವು ಎಂಬುದು ವಾದಾತೀತವಾದರೂ, ಮಹಿಳೆಯರ ಸಂಬಂಧದ 'ಖಾಸಗೀ ವಲಯ'ದ ಕಲ್ಪನೆ ಸ್ಪಷ್ಟವಾಗಿ ದೃಢೀಕರಣಗೊಂಡದ್ದೂ ಇಲ್ಲಿಯೇ. ಇಲ್ಲಿ 'ಸ್ವದೇಶಿ'ಗೂ ಮಹಿಳೆಯರ ರಕ್ಷಣೆಗೂ ಸಂಬಂಧ ತಂದ ರೀತಿ; ಚರಕವನ್ನು ಹೆಣ್ಣಿನ ಪರಿಶುದ್ಧತೆಯ ಸಂಕೇತ ವಾಗಿಸಿದ ರೀತಿ, ಮತ್ತು ರಾಜಕೀಯ ಬದುಕು ಮಹಿಳೆ ಯರಿಗೆ ಅವಶ್ಯವಿಲ್ಲ ಎನ್ನುವ ಧೋರಣೆ ಮಹಿಳೆಗೆ ಅಪಾರ ಮನ್ನಣೆ ಕೊಡುವ ಪಿತೃಪ್ರಧಾನತೆಯ ದಯಾಪರ ಧೋರಣೆಯನ್ನು ತೋರುತ್ತದೆ. ಮತ್ತು ಸಾಂಪ್ರದಾಯಿಕ ಲಿಂಗಧಾರಿತ ಶ್ರಮವಿಭಜನೆಯನ್ನು ಪುಷ್ಟೀಕರಿಸುತ್ತದೆ. ಪುರುಷಾಸಕ್ತಿಯ ಮೌಲ್ಯಗಳು ಈ 'ಭಾರತೀಯ ನಾರಿ'ಯ ಸೃಷ್ಟಿಯಲ್ಲಿ ಎಷ್ಟು ಕೆಲಸ ಮಾಡಿದ್ದವೆಂದರೆ, ಕಾಳಿಯನ್ನು ಹೆಣ್ಣಿನ ಸಂಕೇತವಾಗಿ ತೆಗೆದುಕೊಳ್ಳುವ ವಿಷಯದಲ್ಲಿ ಭಾರೀ ಚರ್ಚೆ ನಡೆದು. ದೈಹಿಕ ಶಕ್ತಿ, ಹಿಂಸೆಗಳನ್ನು ಪ್ರಚೋದಿಸಬಲ್ಲಂತ ಎಲ್ಲ ಸಾಧ್ಯತೆಗಳು ಇಲ್ಲಿರುವುದರಿಂದ ಅದನ್ನು ಸ್ಪಷ್ಟವಾಗಿ ಕೈ ಬಿಡಲಾಯಿತು. (ಸರ್ಕಾರ್ ಇಂತಹ ಚರ್ಚೆಯನ್ನು ಬೆಳಕಿಗೆ ತರುತ್ತಾರೆ.) ಸೀತೆಯನ್ನು ಆರಿಸಿಕೊಳ್ಳಲಾಯಿತು.

ಎರಡನೆಯದಾಗಿ, 'ಹಿಂದೂ ನಾರಿ'ಯ ಕಲ್ಪನೆ. ಇದು ಸ್ವದೇಶೀ ಕಲ್ಪನೆಯನ್ನು ಆಧರಿಸಿಯೇ ರೂಪು ಪಡೆದ RSS ನಂತಹ ಮತೀಯವಾದೀ ಗುಂಪುಗಳು ಸೃಷ್ಟಿಸಿದ ಸ್ತ್ರೀಯ ಕಲ್ಪನೆ. ಇಲ್ಲಿನ ಸಿದ್ಧಾಂತ 'ಸ್ವದೇಶೀ' ಯಾದರೂ ಅವರು ಹೊರಗಿನ ಶತ್ರುಗಳಾಗಿ ಬ್ರಿಟೀಷರನ್ನು ಗುರುತಿಸುವಂತಿರಲಿಲ್ಲ. ತಮ್ಮ 'ಹಿಂದೂ ರಾಷ್ಟ್ರ'ಕ್ಕಾಗಿ ಬ್ರಿಟೀಷರ ವಿರುದ್ಧ ಜನರನ್ನು ಸಂಘಟಿಸುವುದು ಅವರಿಗೆ ಸಾಧ್ಯವಿರಲಿಲ್ಲ. ಏಕೆಂದರೆ ರಾಷ್ಟ್ರೀಯ ಚಳವಳಿ ಈಗಾಗಲೀ ಇಂತಹ ಐಡಿಯಾಲಜಿಯ ಮೇಲೆ ಬೆಳೆದು ನಿಂತಿತ್ತು. ಹೀಗಾಗಿ ಅವರು ಹೊರಗಿನ ಶತ್ರುಗಳಾದ ಬ್ರಿಟೀಷರ ವಿರುದ್ಧ ತಿರುಗದೆ ಒಳಗಿನ ಶತ್ರುಗಳಾದ ಮುಸಲ್ಮಾನರ ವಿರುದ್ಧ ತಿರುಗಿದರು (ಸೀತಾರಾಮ ಯೆಚೂರಿ, FL, 11 Feb 93) ಇದನ್ನು ಬಲಪಡಿಸ ಲಿಕ್ಕಾಗಿ ಹಿಂದೂಗಳು ಮುಸಲ್ಮಾನರ ದೆಸೆಯಿಂದಾಗಿ ತೀರಾ ಅನ್ಯಾಯಕ್ಕೆ ಒಳಗಾದವರು ಎಂಬ ಹುಸೀ ಪ್ರಜ್ಞೆ ಯನ್ನು ಹುಟ್ಟುಹಾಕಿ ಮುಸಲ್ಮಾನರ ವಿರುದ್ಧ ವ್ಯವಸ್ಥಿತ ವಾಗಿ ದ್ವೇಷವನ್ನು ಪ್ರಚೋದಿಸುವುದು ಇಲ್ಲಿ ಮುಖ್ಯ ವಾಗಿತ್ತು. ಇವತ್ತಿನ ಅವರ ಪ್ರಚಾರ-ಕಾರ್ಯಕ್ರಮ ಗಳು ಇದನ್ನೇ ಪ್ರತಿಫಟಿಸುತ್ತವೆ. ಹೀಗೆ ಕಲ್ಪಿತ ಸಮುದಾಯಗಳ ಹಿನ್ನೆಲೆಯಲ್ಲಿ ಕೋಮುವಾದ ಹುಟ್ಟಿ ಕೊಂಡು ಬೆಳೆಯ ತೊಡಗಿತು. ಇಲ್ಲಿ ಧರ್ಮ ಎನ್ನುವುದು ಮಾನವ ಪ್ರೀತಿ, ಸಹಿಷ್ಣುತೆಗಿಂತ ಹೆಚ್ಚಾಗಿ ದ್ವೇಷ, ಅಸಹನೆಗಳ ಸ್ವರೂಪ ಪಡಕೊಂಡಿತು. ವಿರೂಪ ಗೊಂಡಿತು. ಇಲ್ಲಿ ಸೃಷ್ಟಿಗೊಂಡವಳು 'ಹಿಂದೂ ನಾರಿ.' ಈ 'ಹಿಂದೂ ನಾರಿ' ದೈಹಿಕ ಎದೆಗಾರಿಕೆಯುಳ್ಳವಳು, ದುರ್ಗೆಯಂತಹ ಶಕ್ತಿ ದೇವತೆ ಇಲ್ಲಿ ಸಂಕೇತವಾಗುತ್ತಾಳೆ. ಸಾರ್ವಜನಿಕ ಬದುಕಿಗಾಗಿ ಇವಳಿಗೆ ವಿಶೇಷ ತರಬೇತಿಯೂ ದೊರೆಯುತ್ತದೆ. ಇದೇ ಸಮಯದಲ್ಲಿ ಈಕೆ ಕರ್ತವ್ಯ ಪರತೆ, ತ್ಯಾಗ, ಪರಿಶುದ್ಧತೆಗಳ ಮೂರ್ತಿಯೂ ಆಗ ಬೇಕಾದ್ದರಿಂದ ಸೀತೆಯೂ ಇವಳಿಗೆ ಮಾದರಿಯಾಗು ತ್ತಾಳೆ. BJPಯ ನಿಷ್ಠಾವಂತ ಸದಸ್ಯೆಯಾದ ಉಮಾ ಭಾರತಿ, ಸಹ ಸದಸ್ಯನೊಬ್ಬನೊಡನೆ ವಯಕ್ತಿಕ ಸಂಬಂಧಕ್ಕೆ ಬಿದ್ದ ಸಂದರ್ಭದ ಹಿನ್ನೆಲೆಯಲ್ಲಿ ಆಕೆ ತನ್ನ ಪರಿಶುದ್ಧತೆಯನ್ನು ಸೀತೆಯೋಪಾದಿಯಲ್ಲಿ ಬಹಿರಂಗ ವಾಗಿ ಸಾಬೀತುಗೊಳಿಸುವಂತೆ ಒತ್ತಾಯಿಸಲಾಯಿತು. ಇದೇ ಉಮಾಭಾರತಿಗೆ, ಮುಸಲ್ಮಾನರ ವಿರುದ್ಧ ಹಿಂಸಾ ಕೃತ್ಯಗಳನ್ನು ಕೈಗೊಳ್ಳುವಲ್ಲಿ ಹಿಂದೂಗಳನ್ನು ಪ್ರಚೋ ದಿಸುವಾಗ ದುರ್ಗೆ ಆದರ್ಶವಾಗುತ್ತಾಳೆ. ಸಂಪೂರ್ಣ

# ಕೋಮುವಾದ–ಒಂದು ಅನಿಸಿಕೆ

ಕೋಮುವಾದದ ಗಲಾಟೆಯ ಹಿನ್ನೆಲೆಯಲ್ಲಿ ನಾನು ಬಹಳಷ್ಟು ಮಹಿಳೆಯರನ್ನು ಈ ಬಗ್ಗೆ ಪ್ರಶ್ನಿಸಿದಾಗ ಉತ್ತರ ಎರಡು ರೀತಿಯದ್ದಾಗಿರುತ್ತದೆ. "ಅಯ್ಯೋ ನಮಗೆ ಬದುಕೋದು ಮುಖ್ಯ. ಅಲ್ಲಿ ಬಾಬರಿ ಮಸೀದಿ ಕಟ್ಟೋದಾಗಲೀ ಅಥವಾ ದೇವಸ್ಥಾನ ಕಟ್ಟೋದಾಗಲೀ ನಮಗೇಕೆ ಬೇಕು." ನಮ್ಮ ಮನೆಯಲ್ಲಿ ಕೆಲಸ ಮಾಡುವ ತಾರಮ್ಮ ಈ ಮಾತು ಹೇಳುತ್ತಾರೆ. ಈಕೆಯ ಹೆಸರು ತಾರಾಬೆಹನ್ ಎಂದು ಏನೋ ನಮಗ ತಿಳಿಯದು. ನಮ್ಮ ಬೀದಿಗೆಲ್ಲ ಈಕೆ ಹೀಗೆಯೇ ಪರಿಚಿತಳು. ಈಕೆಯ ಮಗಳು ದಿಲ್‌ಶಾದ್ ಕೂಡ ಮನೆಗೆಲಸ ಮಾಡುತ್ತಾಳೆ. ಮನೆಗೆಲಸ ಮಾಡಿ ಕುಡಿಯುವ ಗಂಡನೊಡನೆ ಏಗಬೇಕಾದ ತಾರಮ್ಮನಿಗೆ ಬದುಕು ಮುಖ್ಯ. "ಅಲ್ಲ, ಅಲ್ಲಿ ಅವರು ಕಟ್ಟಿ ಪೂಜೆ ಮಾಡೋ ದೇವರಿಗೆ ನಾವು ಯಾಕೆ ಜಗಳ ಮಾಡೋದು, ನಿಮಗೆ ಕಾಯಿಲೆ ಕಸಾಲೆ ಬಂದ್ರೆ ಮಂತ್ರ ಹಾಕೋಕೆ ಮಸೀದೀನೂ ಬೇಕಾಗ್ತದೆ, ನಮಗೆ ಕಾಯಿಲೆ ಕಸಾಲೆ ಬಂದ್ರೆ ನಿಮ್ಮ ದೇವ್ರೂ ಗಂಗಮ್ಮನೂ ಬೇಕಾಗುತ್ತದೆ." ಹೀಗೇಳುವ ಈಕೆ 'ಅಯ್' ಅಂತ ರಾಗ ಎಳೆದು ಈ ಗಲಾಟೆಯ ಬಗ್ಗೆ ಮುಗಿಸಿ ಬಿಡುತ್ತಾಳೆ. ಬದುಕುವ ಬವಣೆಗೇ ಹೋರಾಡಬೇಕಾದ ನಾವು ಇಂತವುಗಳನ್ನು ಕಟ್ಟಿಕೊಂಡು ಏನು ಮಾಡಬೇಕು ಎನ್ನೋದು ಇವರ ಅಭಿಪ್ರಾಯ. ಇನ್ನು ಕೆಲವು ಮಧ್ಯಮ ವರ್ಗದ ಹೆಂಗಸರು "ರಾಮನ ದೇವಸ್ಥಾನ ಬೇಕು, ಈ ದೇಶನ ಮುಸಲ್ಮಾನರಿಗೇ ಬಿಟ್ಟು ಬಿಡೋಕೆ ಆಗುತ್ತಾ ?" ಅಂತ ರಾಜಕೀಯ ಗೊತ್ತಿರುವ ಹಾಗೆ ಅಭಿಪ್ರಾಯ ಪಡುತ್ತಾರೆ. ಹೀಗೇ ಈ ಹೆಂಗಸರಲ್ಲಿ ಮಾತನಾಡಿದರೆ ಇವರ ಮನೆಯ ಗಂಡಸರು ಇಂತಹ ಚರ್ಚೆಯಲ್ಲೋ ಅಥವಾ ಕ್ರಿಯಾಶೀಲರಾಗಿ ಇದನ್ನು ಪ್ರತಿಪಾದಿಸುವ ಕ್ರಿಯೆಯಲ್ಲೊ ತೊಡಗಿರುವುದು ತಿಳಿದು ಬರುತ್ತದೆ. ಪಕ್ಕದ ಮನೆಯ ಬೂಬಮ್ಮರೊಡನೆ ಪ್ರೀತಿ / ಆತ್ಮೀಯ ವಿಶ್ವಾಸದಿಂದಲೇ ಇರುವ ಇವರು ಈ ರೀತಿಯ ಅಭಿಪ್ರಾಯಗಳನ್ನು ತಮ್ಮ ಮನೆಯ ಗಂಡಸರಿಂದಾಗಿ ಹಂಚಿಕೊಂಡಿರುತ್ತಾರೆಂದು ತಿಳಿದುಬರುತ್ತದೆ. 'ನೀವೇನಾದ್ರೂ ಕ್ರಿಯಾಶೀಲರಾಗಿ ಇದಕ್ಕೆ ಏನಾದ್ರೂ ಮಾಡ್ತೀರ' ಅಂದ್ರೆ 'ಅಯ್ಯೋ ಏನು ಮಾಡೋದು, ಅವರು ಅಲ್ಲಿ ಜಗಳ ಆಡ್ತಾರೆ ಅಂತ ನಾವು ನಮ್ಮ ಪಕ್ಕದ ಮನೆಯವರನ್ನ ಎದುರು ಹಾಕಿಕೊಳ್ಳೋಕೆ ಆಗುತ್ತಾ, ಒಂದು ತಗಾಳಾಕೆ, ಕೋಡೋಕೆ ನೆರೆ-ಹೊರೆ ಅಂತ ಬೇಕಾಗ್ತದಲ್ಲ'—ಎಂದು ತಮ್ಮ ಅಭಿಪ್ರಾಯಗಳಿಗೆ ತಾವೇ ವಿರೋಧಾಭಾಸ ವ್ಯಕ್ತಪಡಿಸುತ್ತಾರೆ. ಇಂತಹ ಅಭಿಪ್ರಾಯಗಳು ಬೆಂಗಳೂರಿನ ಸುತ್ತ-ಮುತ್ತಲಿನ ಹಳ್ಳಿಗಳಲ್ಲಿ ಕಂಡುಬರುತ್ತವೆ.

ಹಾಗಿದ್ದರೆ ಸಾಮಾನ್ಯರಲ್ಲಿ ಈ ಕೋಮುವಾದ ಎಂಬುದು ಒಂದು ಮನದೊಳಗಿನ ಸಮಸ್ಯೆಯೇ ? ಈ ಭಾವನೆ ಇದ್ದರೆ ಅದು ಯಾವ ರೀತಿ ಇಂದು ಅಭಿವ್ಯಕ್ತಗೊಳ್ಳುತ್ತಿದೆ ? ಈ ಭಾವನೆ ಇಲ್ಲ ಎಂದು ಅಲ್ಲ, ಇದೆ ಆದರೆ ಅದು ಜಾತಿಯ ಸಮಸ್ಯೆ ಇರುವ ಹಾಗೆ. ಇಂದಿಗೂ ಜಾತಿ—ಜಾತಿ ಮಟ್ಟದಲ್ಲಿ ದೂರಸರಿಸುವಿಕೆಯ ಪ್ರಕ್ರಿಯೆಯನ್ನು ನಾವು ಕಾಣಬಹುದು. ಇದು ಪಟ್ಟಣ ಹಾಗೂ ಹಳ್ಳಿಗಾಡುಗಳಲ್ಲಿ ಕಾಡುತ್ತಿರುವ ಸಮಸ್ಯೆ. 'ಮುಸ್ಲಿಂ'-ಜನಾಂಗವನ್ನು ಹೀಗೆ ಜಾತಿ ಮಟ್ಟದಲ್ಲಿ ದೂರ ಸರಿಸುವಂತೆ ಜನ ದೂರ ಸರಿಸುತ್ತಾರೆ. 'ಮುಸ್ಲಿಂ'-ರು ಒಂದು ಭಿನ್ನ ಜಾತಿಯಾಗಿಯೇ ಕಾಣುವುದು. ಜನಾಂಗಗಳ ಮಧ್ಯೆ ಹುಡುಗ / ಹುಡುಗಿಯರ ಮದುವೆ ಇತ್ಯಾದಿಗಳಿಗೆ ಸಂಬಂಧವಿಟ್ಟಂತೆ ಗಲಾಟೆಗಳಾದಾಗ ಅಥವಾ ಆಸ್ತಿಗೆ ಸಂಬಂಧಪಟ್ಟಂತೆ ಹತ್ತಿರದಲ್ಲಿ ಆಗುವ ಗಲಾಟೆಗಳಲ್ಲಿ ಈ ಕೋಮುವಾದದ ಪ್ರಶ್ನೆಗಳು ತೀವ್ರವಾಗಿ ಉಲ್ಬಣಿಸಬಹುದೇ ಹೊರತು 'ಮುಸ್ಲಿಂ' ರನ್ನೇ ಈ ಜನ ಪ್ರತ್ಯೇಕವಾಗಿಸಿ ನೋಡುತ್ತಾರೆ ಎಂದು ಅನಿಸುವುದಿಲ್ಲ. ಬಹಳಷ್ಟು ಹಳ್ಳಿಗಾಡು ಪ್ರದೇಶದ ಮಹಿಳೆಯರಿಗೆ ಕೋಮುವಾದ ಒಂದು ಸಮಸ್ಯೆಯೇ ಆಗಿರದ ಹಾಗೆ ಅವರ ನಿರ್ಲಿಪ್ತ ಉತ್ತರಗಳನ್ನು ನೋಡಿದಾಗ ಅನಿಸುತ್ತದೆ. ಇವರಲ್ಲಿ ಜನಗಳ ಮೇಲೆ ಅವಲಂಬಿತನ ಜಾಸ್ತಿ ಮಟ್ಟದ್ದಾಗಿರುತ್ತಿದೆ. ಜಾತಿ ಮಟ್ಟದ ದೂರ ಸರಿಸುವಕೆ ಇವರಲ್ಲಿ ಇದ್ದರೂ ವ್ಯಾವಹಾರಿಕವಾದ ಅವಲಂಬಿತನಗಳು ಇವರಲ್ಲಿ ಇರುತ್ತದೆ. ಹಾಗಾಗಿ 'ಮುಸ್ಲಿಂ' ಜನಾಂಗದ ಮೇಲೆಯೇ ವಿಶೇಷವಾಗಿ ರೋಷ ಕಾರುವಂತಹ ಸಂದರ್ಭಗಳನ್ನು ಹುಟ್ಟು ಹಾಕುವ ಪ್ರಯತ್ನಗಳನ್ನು ಇವರು ಮಾಡುವುದಿಲ್ಲ.

ಮಹಿಳೆಯರಿಗೆ ಇಂತಹ ರಾಜಕೀಯ ಅಗತ್ಯವೇ ? ಬಹುಪಾಲು ಮಹಿಳೆಯರ ಗಮನವೆಲ್ಲ ಕುಟುಂಬವನ್ನು ಉಳಿಸುವ/ಬೆಳೆಸುವ ಕಡೆಗೇ ಇರುತ್ತದೆ. ಕೋಮುವಾದದ ಬಗ್ಗೆ ಸಾಮರಸ್ಯದ ಮಾತನಾಡುವ ಎಲ್ಲರೂ ಹಿಂದುಗಳೊಳಗೆ ಏನೋ ಮಹಾ ಒಗ್ಗಟ್ಟು ಇದೆ ಎನ್ನುವ ರೀತಿ ಮಾತನಾಡುತ್ತಿರುತ್ತವೆ. ಜಾತಿಯ ಮೂಲಕ/ವರ್ಗದ ಮೂಲಕ ಹಿಂದೂ ಜನಾಂಗ ಛಿದ್ರ ಛಿದ್ರವಾಗಿಲ್ಲವೇ ? ಸಾಮರಸ್ಯ-ಎನ್ನುವುದನ್ನು ಮಹಿಳೆಯರು ಯಾವ ಹಂತದಲ್ಲಿ ನಡೆಸಬಹುದು ಎನ್ನುವಂತಹ ಪ್ರಶ್ನೆ ಬಂದಾಗ ನನಗೆನ್ನಿಸುವುದು ಹೀಗೆ. ನಾವು ನಮ್ಮೊಳಗೆ ಆ ಸಂಸ್ಕೃತಿಯ ಒಳನೋಟಗಳನ್ನು ಅಳವಡಿಸಿಕೊಳ್ಳುವ, ದಿನ ನಿತ್ಯದ ಜೀವನದಲ್ಲಿ ಅವರ ಬದುಕಿನ ಆಯಾಮಗಳೊಳಗೆ ಹಮ್ಮಿಕೊಳ್ಳುವ, ಅವರ ಹಾಗೂ ನಮ್ಮ ನಡುವೆ ಇರುವ ಗೋಡೆಗಳನ್ನು ಒಡೆಯಲು ನಿತ್ಯ ಜೀವನದಲ್ಲಿ ಸಾಕಷ್ಟು ಸಂಪರ್ಕ ಮಾಧ್ಯಮಗಳನ್ನು ಹೆಚ್ಚಿಸಿಕೊಳ್ಳುವ, ಕೊಡ-ಕೊಳ್ಳುವ ವ್ಯವಹಾರದಲ್ಲಿ ಹೆಚ್ಚು ಆತ್ಮೀಯರಾಗುವ ಮಕ್ಕಳಲ್ಲಿ ಈ ಬಗ್ಗೆ ಕಾಳಜಿ ಬೆಳಸಿ ಸ್ನೇಹಕ್ಕೆ ಏರ್ಪಡಿಸುವ—ಇಂತಹ ದಿನ ನಿತ್ಯದ ಬದುಕಿನ ಪ್ರಕ್ರಿಯೆಗಳಲ್ಲಿ ಸಾಮರಸ್ಯ ಮೂಡಿಸುವ ಪ್ರಯತ್ನಗಳು ನಡೆಯಬೇಕು. ನಿತ್ಯ ಜೀವನದ ಒಳನೋಟಗಳಿಲ್ಲದೇ ಹೊರಗಿನ ರಾಜಕೀಯ ಸಾಮರಸ್ಯದ ಪ್ರಯತ್ನಗಳು ಯಾವ ಮೂಲಭೂತ ಬದಲಾವಣೆ ತರಲಾರವು. ನಿತ್ಯ ಜೀವನದ ಬದುಕಿನ ಸಾಮರಸ್ಯಗಳನ್ನು ಮಹಿಳೆಯರು ಆತ್ಮೀಯವಾಗಿ ಏರ್ಪಡಿಸಬಲ್ಲರು ಹಾಗೂ ಏರ್ಪಡಿಸಬೇಕು.

● ಹೆಚ್. ಎಸ್. ಚಂಪಾವತಿ

ಸ್ವಯಂ ಹಿತಾಸಕ್ತಿಗಾಗಿಯೇ ಸೃಷ್ಟಿಸಿಕೊಂಡ ಸೀತೆ-ದುರ್ಗೆಯರ ವಿರೂಪಗೊಂಡ ಮಾದರಿಗಳು ಇಲ್ಲಿ ಬಯಲಾಗುತ್ತವೆ. ಈ ಮತೀಯವಾದೀ ಗುಂಪುಗಳ ಶಾಖೆಗಳಲ್ಲಿ ಮಹಿಳೆಯರಿಗೆ ಕೊಡುವ ತರಬೇತು ಪ್ರತ್ಯೇಕ-ಖಾಸಗಿಯಾಗಿದ್ದು, ಮಹಿಳೆಯರ 'ಖಾಸಗೀ ವಲಯ'ವನ್ನು ಕಾಯ್ದುಕೊಂಡು ಹೋಗುವಲ್ಲಿ ಎಲ್ಲಿ ಬಗೆಯ ಎಚ್ಚರಿಕೆ ವಹಿಸಲಾಗುತ್ತದೆ.

ಮೇಲಿನ ಚರ್ಚೆಯಲ್ಲಿ ಸ್ಪಷ್ಟವಾಗುವ ಅಂಶವೆಂದರೆ, 'ಭಾರತೀಯ ನಾರಿ' ಮತ್ತು 'ಹಿಂದೂ ನಾರಿ'ಯ ಕಲ್ಪನೆಗಳೆರಡೂ ಧರ್ಮಾಧಾರಿತವಾಗಿಯೇ ರೂಪಿತಗೊಂಡವು. ಇದು ಬ್ರಾಹ್ಮಣಿಕ, ಹಿಂದೂ ಧರ್ಮಶಾಸ್ತ್ರಗಳಿಂದ ಸೆಳೆದುಕೊಳ್ಳಲ್ಪಟ್ಟ ಕಲ್ಪನೆಗಳು. ಮಹಿಳೆಯರ ಉನ್ನತಿ, ಸಮಾನತೆಗಳ ಭಾಷೆಯಲ್ಲಿ ಮಾತನಾಡುತ್ತಲೇ 'ಖಾಸಗೀ ವಲಯ'ದ ಕಲ್ಪನೆಯನ್ನು ದೃಢೀಕರಿಸುತ್ತವೆ. ಮತ್ತು ಇವೆರಡೂ ಹೇರಲ್ಪಟ್ಟ (forced) ಐಡೆಂಟಿಟಿಗಳು. ಆದರೆ ತುಚ್ಛ ಸ್ವಯಂ ಹಿತಾಸಕ್ತಿಗಾಗಿಯೇ ಸೀತೆ-ದುರ್ಗೆ ಮುಂತಾದ ಧಾರ್ಮಿಕ ಕಲ್ಪನೆಗಳನ್ನು ಮನಬಂದಂತೆ ತಿರುಚಿ ಹೆಣ್ಣಿನ ವಿರೂಪ ಮಾದರಿಯೊಂದನ್ನು ಸೃಷ್ಟಿಸುವ ಕೋಮುವಾದೀ ಶಕ್ತಿಯ ಬಗ್ಗೆ ಹಿಂದೆಂದಿಗಿಂತಲೂ ನಾವು ತುಂಬಾ ಎಚ್ಚರಿಕೆಯಿಂದಿರಬೇಕಾಗುತ್ತದೆ. ಆದೇನೇಯಾದರೂ ಇಂತಹ ಮಾದರಿಗಳ ಸೃಷ್ಟಿ ಪ್ರಬಲ ವಾಹಿನಿಯ ಕಲ್ಪನೆಯನ್ನಾಧರಿಸಿದ್ದೇ ಹೊರತು ಇಲ್ಲೆಲ್ಲೂ ದಲಿತ ಇಲ್ಲವೇ ಗಿರಿಜನ cosmoltogy ಒಳಗೊಂಡೇ ಇಲ್ಲ. ಆದ್ದರಿಂದಲೇ ಅಂದಿಗೂ-ಇಂದಿಗೂ ಇಂತಹ forced identity ಗಳಿಂದ ನಮ್ಮ ದಲಿತ-ಗಿರಿಜನ ಮಹಿಳೆಯರು ಮುಕ್ತರಾಗಿಯೇ ಉಳಿದಿದ್ದಾರೆ. ಇದೇ ಹಿನ್ನಲೆಯೇ ಇಂದು 'ಕೋಮುವಾದ' ಎನ್ನುವುದು ದಲಿತ-ಗಿರಿಜನ ಮಹಿಳೆಯರಿಗೆ ಭಾವನಾತ್ಮಕವಾಗಿ ಏನೇನೂ ಆಗದೇ ಹೋಗಿರುವುದು (ಹೊರಗಿನ ಕ್ಷುದ್ರ ರಾಜಕೀಯ ಶಕ್ತಿಗಳು ಅವರನ್ನು ಬಳಸಿಕೊಂಡಿರಬಹುದಾದ್ದು ಬೇರೆ ಸಂಗತಿ), ಕಿಂಚಿತ್ತೂ ಅರ್ಥ ಕೊಡದೇ ಹೋಗಿರುವುದದ್ನು ಸ್ಪಷ್ಟಪಡಿಸುತ್ತದೆ. ಇದನ್ನು ಬಲಪಡಿಸಲು, ಮಹಿಳಾ ಸಮಖ್ಯಾದ ಉಮಾ ಕುಲಕರ್ಣಿಯವರು ವಿವರಿಸಿದ ಘಟನೆಯನ್ನು ಅವರದೇ ಮಾತುಗಳಲ್ಲಿ ಇಲ್ಲಿ ಕೊಡಲು ನಾನು ಇಷ್ಟಪಡುತ್ತೇನೆ : ಮಹಿಳಾ "ಸಮಖ್ಯಾ ಬೀದರ್, ಬಿಜಾಪೂರ, ರಾಯಚೂರು,

## ಕೋಮು ಗಲಭೆ ಮತ್ತು ಮಹಿಳೆ

ಗುಲ್ಬರ್ಗ ನಗರದಲ್ಲಿ ಮುಸಲ್ಮಾನರೇ ಹೆಚ್ಚಾಗಿರುವ ಒಂದು ಪ್ರದೇಶವಿದೆ. ಆದನ್ನು 'ಮಿನಿ ಪಾಕಿಸ್ತಾನ' ಎಂತಲೇ ಕರೆಯುತ್ತಾರೆ. ಈ ಸಲ ಗುಲ್ಬರ್ಗ ಕೋಮು ಗಲಭೆಯಲ್ಲಿ ಒಬ್ಬರೂ ಮುಸಲ್ಮಾನರು ಭಾಗವಹಿಸಲಿಲ್ಲ. ಪೋಲೀಸರೇ ಬಹುಪಾಲು ಗಲಭೆಗೆ ಕಾರಣರಾದವರು. ಇದೇ ಪ್ರದೇಶದಲ್ಲಿ ಇರುವ ರಾಘವೇಂದ್ರ ಮಠದ ಪಕ್ಕದಲ್ಲಿ ಕೆಲವು ಮೇಲ್ಜಾತಿ ಕುಟುಂಬಗಳಿವೆ. ಗಲಭೆಯ ಸಂದರ್ಭದಲ್ಲಿ ಇಲ್ಲಿನ ಹೆಂಗಸರನ್ನು ಬೀದಿಗೆಳೆದು, ಬೆತ್ತಲೆ ಮಾಡಿ ಹೊಡೆದರು ಪೋಲೀಸರು. ನಂತರ ಮುಸಲ್ಮಾನರು ಈ ಕೃತ್ಯಕ್ಕೆ ಕಾರಣವೆಂದು ದೂರು ದಾಖಲು ಮಾಡಿಕೊಂಡರು. ಆದರೆ ಹೀಗೆ ಹಲ್ಲೆಗೊಳಗಾದ ಎಲ್ಲ ಕುಟುಂಬಗಳು ಒಂದಾಗಿ ಪೋಲೀಸರೇ ತಮ್ಮ ಮೇಲೆ ಹಲ್ಲೆ ನಡೆಸಿದರೆಂದು ಸ್ಪಷ್ಟವಾಗಿ ತಿಳಿಸಿದರು. ಕೊನೆಗೆ ಹೊರಬಂದ ಸತ್ಯವೆಂದರೆ, ಹಿಂದೆ ಯಾವುದೋ ಕೊಲೆ ಕೇಸಿನಲ್ಲಿ ಪೋಲೀಸರು ಇಲ್ಲಿ ಸಿಕ್ಕಿಹಾಕಿಕೊಂಡಿದ್ದರು. ಅವರ ಪ್ರತೀಕಾರ ಇಟ್ಟುಕೊಂಡು ಇಲ್ಲಿ ವರ್ತಿಸಿದ್ದರು.

* * * *

ಬೀದರಿನ ಹಳ್ಳಿಗಳ ಮಹಿಳಾ ಸಂಘಗಳಲ್ಲಿ ಕರ್ಫ್ಯೂ ಬಗ್ಗೆ ಹಂಗಸರು ಚರ್ಚಿಸಿದರು. ತಮ್ಮ ಹಳ್ಳಿಗಳಲ್ಲಿ ಕೆಲ ಕಾಲದಿಂದ ಅಂಗಡಿಗಳಲ್ಲಿ ಸಾಮಾನು ಸಿಗದೆ ತೊಂದರೆಯಾಗಿದೆ. ಅಂಗಡಿಯವರನ್ನು ಕೇಳಿದರೆ ನಗರದಲ್ಲಿ ಕರ್ಫ್ಯೂ; ಅಂಗಡಿಗಳು ಮುಚ್ಚಿವೆ. ಆದ್ದರಿಂದ ಸಾಮಾನು ತರುವುದು ಸಾಧ್ಯವಾಗುತ್ತಿಲ್ಲ ಎಂದು ಹೇಳುತ್ತಾರೆ. ಕರ್ಫ್ಯೂ ಎಂದರೆ ಏನು ? ಎತ್ತ ? ಒಂದೂ ನಮಗೆ ಗೊತ್ತಿಲ್ಲ. ಅಂಗಡಿಯಲ್ಲಿ ದಿನಬಳಕೆಯ ವಸ್ತುಗಳು-ದಿನಸಿ ಇತ್ಯಾದಿ ಸಿಗದೆ ಕುಟುಂಬ ನಡೆಸಿಕೊಂಡು ಹೋಗುದ ಹೆಂಗಸರಿಗೆ ಬಹಳ ತೊಂದರೆಯಾಗಿದೆ. ಅದ್ದರಿಂದ ಈ ಕರ್ಫ್ಯೂ ಎಂದರೆ ಏನು ? ಆದೇಕೆ ಬೇಕು ಇತ್ಯಾದಿ ಕಳಿಸಿಕೊಡುವಂತೆ ಸಹಯೋಗಿನಿಯನ್ನು ಕೇಳಿದರು. ಹೀಗೆ ಪ್ರಾರಂಭವಾದ ಚರ್ಚೆಯಲ್ಲೇ ಅವರಿಗೆ 'ಕೋಮುವಾದ' ಕಲ್ಪನೆಯ ಪರಿಚಯವಾಗಿ ಹೀಗೂ ಉಂಟೆ ? ಎಂದು ಆಶ್ಚರ್ಯಪಟ್ಟುಕೊಂಡರು.

(ಇವೆರಡೂ ಸನ್ನಿವೇಶಗಳನ್ನು ವಿವರಿಸಿದವರು ಮಹಿಳಾ ಸಮಖ್ಯಾದ ಉಮಾ ಕುಲಕರ್ಣಿಯವರು)

# ಬೆಳಗಾವಿಯಲ್ಲಿಯ ಕೋಮು ಗಲಭೆ, ಅನುಭವಿಸಿದವರ ಅನಿಸಿಕೆ

ಬೆಳಗಾವಿಯಲ್ಲಿ ಡಿಸೆಂಬರ್ ಹತ್ತೊಂಬತ್ತುನೂರಾ ತೊಂಬತ್ತೆರಡರ ಆರಕ್ಕೆ ಮುಂಚೆ ಮತ್ತು ಅನಂತರದಲ್ಲಿ ಕೋಮು ಗಲಭೆಗಳು ಜರುಗಿ ಜನಜೀವನ ಅಸ್ತವ್ಯಸ್ತಗೊಂಡು ಅನೇಕ ತೊಂದರೆಗಳನ್ನು ನಾಗರಿಕರು ಅನುಭವಿಸಬೇಕಾಯಿತು. ಅದನ್ನು ಅನುಭವಿಸಿದ ಕೆಲವು ಜನರನ್ನು ಪ್ರತಿಕ್ರಿಯೆಗಾಗಿ ಸಂಪರ್ಕಿಸಿದಾಗ ವಿವಿಧ ಬಗೆಯ ಪ್ರತಿಕ್ರಿಯೆಗಳು ಈ ಪ್ರಕಾರವಾಗಿದ್ದವು. ಸಂಪರ್ಕಿಸಿದವರಲ್ಲಿ ಯಾರೂ ಕೋಮು ಗಲಭೆ ಜರುಗಬೇಕೆಂದು ಪ್ರತಿಕ್ರಿಯಿಸಿಲ್ಲ. ಇದರಿಂದ ಕಂಡು ಬರುವ ಒಂದು ಸಂಗತಿಯೆಂದರೆ ಸಾಮಾನ್ಯ ಜನರಲ್ಲಿ (ರಾಜಕೀಯ, ಧಾರ್ಮಿಕ, ಮುಂದಾಳುಗಳನ್ನು ಹೊರತುಪಡಿಸಿ) ಕೋಮು ಅಸಂತೋಷ ಇಲ್ಲವೇ ಇಲ್ಲ. ಇರುವ ಸ್ವಲ್ಪಮಟ್ಟಿನ ತಾರತಮ್ಯದ ಬಗೆಗೆ ಅಸಂತೋಷವಿದ್ದರೂ ಅದನ್ನು ಗಲಭೆಯಲ್ಲಿ ಪರಿವರ್ತಿಸಬೇಕೆಂಬ ಇಚ್ಛೆಯವರಿಲ್ಲ. ಸೌಹಾರ್ದದಿಂದ ಬದುಕುವುದೇ ಎಲ್ಲರ ಅಭಿಪ್ರಾಯವಾಗಿರುತ್ತದೆ. ಕೆಲವರ ಅಭಿಪ್ರಾಯವಂತೂ ಕೋಮು ಗಲಭೆಗಳು ಜರುಗಬಾರದೆಂದು ಆಗಿರುತ್ತದೆ.

ಪ್ರಥಮವಾಗಿ ಮಹಾನಗರ ಸಭೆಯ ಕರ್ಮಚಾರಿ ಕಸಗುಡಿಸುವ ಶ್ರೀಮತಿ ರತ್ನವ್ವಾ ಕೋಲಕಾರ ಪ್ರಕಾರ ಕೋಮು ಗಲಭೆಯ ಪರಿಣಾಮ ಅವಳ ನಿತ್ಯ ಜೀವನದ ಮೇಲೆ ಏನೂ ಪರಿಣಾಮ ಬೀರಿಯೇ ಇಲ್ಲಿ. ಯಾವುದೇ ಬಗೆಯ ತೊಂದರೆಯೂ ಅವಳಿಗೆ ಆಗಿಲ್ಲ. ಗದ್ದಲಕ್ಕೆ ಕಾರಣವೂ ಅವಳಿಗೆ ಗೊತ್ತಿಲ್ಲ. ನಿತ್ಯದಂತೆಯೇ ಅವಳ ಜೀವನ ಸಾಗಿದ್ದಿತು.

ಇನ್ನೊಬ್ಬ ಮಹಿಳೆ ನಗರ ಕೇಂದ್ರ ಭಾಗದಿಂದ ದೂರದ ಬಡಾವಣೆಯಲ್ಲಿಯ ಮಾಧ್ಯಮಿಕ ಶಾಲೆಗೆ ನಿತ್ಯ ಚಲಿಸುವ ಶಿಕ್ಷಕಿ ಶ್ರೀಮತಿ ಗ್ರಾಮೋಪಾಧ್ಯೆ ಆರ್. ಎಸ್. ಕಂಡಲ್ಲಿ ಗುಂಡಿಕ್ಕುವ ಆಜ್ಞೆಯು ಎಲ್ಲರನ್ನೂ ಬಾಗಿಲು ಮುಚ್ಚಿಕೊಂಡು ಮನೆಯಲ್ಲಿಯೇ ಇರುವಂತೆ ಮಾಡಿತು. ಬೀದಿಗಳೆಲ್ಲ ಬಿಕೋ ಎನ್ನುತ್ತಿದ್ದವು. ದುಡಿವ ಕೈಗಳೆಲ್ಲ ಖಾಲಿಯಾಗಿ ಮನೆಯಲ್ಲಿಯೇ ಕುಳಿತು ದುಡಿವ ಶಕ್ತಿಯನ್ನು, ಸಮಯವನ್ನು ಹಾಳು ಮಾಡಿದವು. ಮಕ್ಕಳು ಶಾಲಾಭ್ಯಾಸದಿಂದ ವಂಚಿತರಾದರು. ದೈನಂದಿನ ಸಾಮಾನು ತರಲು ಪೇಟೆಗೆ ಹೋದರೆ ಮರಳಿ ಮನೆ ತಲುಪುವೆವೋ ಇಲ್ಲವೋ ಎನ್ನುವ ದುಗುಡ ಮನದಲ್ಲಿ. ಅದರಲ್ಲಿಯೇ ಬಂದೂಕುದಾರಿ ಪೋಲಿಸರ ಹಾವಳಿ. ಹಾಲಿನ ದರ ಲೀಟರ್‌ಗೆ ಇಪ್ಪತ್ತು ರೂಪಾಯಿಗಳವರೆಗೂ ಜಿಗಿಯಿತು. ನಿರರ್ಥಕವಾಗಿ ಕುಳಿತು ಮನೆಯಲ್ಲಿಯ ಮಕ್ಕಳಾದಿಯಾಗಿ ಎಲ್ಲರನ್ನೂ ಸಾಂತ್ವನ ಪಡಿಸುವವುದೂ ಕಿರಿಕಿರಿಯಾಯಿತು. ಅರ್ಧ ಕಿಲೋಮೀಟರು ಚಲಿಸಿ ಬಸ್ ಹಿಡಿಯಲು ಹೋಗಬೇಕೆಂದರೂ ತೊಂದರೆ ಯಾವುದೇ ಚಟುವಟಿಕೆ ಇಲ್ಲದೇ ನಂತರದ ಸುದ್ದಿಗಳಿಗೂ ರೇಡಿಯೋ ದೂರದರ್ಶನ ಅವಲಂಭಿಸಬೇಕಾದ ಸ್ಥಿತಿ ಬಂದಿದ್ದೀತು. ಇಂಥ ಗಲಭೆಗಳು ಮತ್ತೊಮ್ಮೆ ಗತಿಸಲೇಬಾರದು.

ಡಾ॥ ಶ್ರೀಮತಿ ಸಾವಿತ್ರಿ ದೊಡ್ಡಣ್ಣವರ ನಗರದ ಶ್ರೀಮಂತ ಬಡಾವಣೆಯಲ್ಲಿ ನರ್ಸಿಂಗ್ ಹೋಮ ಚಲಾಯಿಸುವ ಸ್ತ್ರೀರೋಗ ತಜ್ಞೆ. ಅವರ ಪ್ರಕಾರ ನಗರದಲ್ಲೆಲ್ಲ ನೀರವತೆಯೇ ಪಸರಿಸಿದ್ದಿತು. ಸಂಜೆಯ ಆರು ಘಂಟೆಯ ನಂತರ ಚಟುವಟಿಕೆಗಳೆಲ್ಲ ಸ್ತಬ್ಧ. ಜರೂರು ಚಿಕಿತ್ಸೆಗಾಗಿ ರೋಗಿಗಳನ್ನು ಬೇರೆ ಹಾಸ್ಪಿಟೆಲ್ಲಿಗೆ ಕಳುಹಿಸುವುದೂ ಕಷ್ಟವಾಗಿದ್ದಿತು. ಇದರಿಂದ ಅನೇಕ ರೋಗಿಗಳಿಗೆ ತೊಂದರೆಯಾಯಿತು. ರೋಗಿಗಳ ಸಂಖ್ಯೆಯೂ ಗಣನೀಯವಾಗಿ ಕಡಿಮೆಯಾಗಿದ್ದಿತು. ಅದಕ್ಕೆ ಕಾರಣ ಭೀತಿಯಿಂದ ಜನರು ಹೊರಬಾರದುದು. ಇಂಥ ಗಲಭೆಗಳು ಯಾವ ಕಾಲಕ್ಕೂ ಅನಪೇಕ್ಷಣೀಯ.

ಇನ್ನೊಬ್ಬ ಮಹಿಳೆ ವಯೋವೃದ್ಧೆ ನಗರ ಕೇಂದ್ರ ಭಾಗದಲ್ಲಿರುವ ಶ್ರೀಮತಿ ಸುಮಿತ್ರಾ ನೇಮಿನಾಥ ಇಂಚಲರು. ಅವರಿಗೆ ಇಂಥ ಗಲಭೆಗಳ ಬಗೆಗೆ ಜಿಗುಪ್ಸೆ. ಅವು ಜರುಗಲೇಬಾರದು. ಯಾವುದೇ ಸಮಸ್ಯೆಯಿದ್ದರೂ ಅದನ್ನು ಸಾಮೋಪಾಯದಿಂದಲೇ ಬಗೆಹರಿಸಿಕೊಳ್ಳಬೇಕು. ಅಹಿಂಸೆಯ ಮಾರ್ಗವೇ ಸಮಸ್ಯೆಯನ್ನು ಪರಿಹರಿಸಿಕೊಳ್ಳುವ ಸಾಧನೆಯಾಗಿರುತ್ತದೆ. ತಮ್ಮ ತಮ್ಮಲ್ಲಿ ಬಡಿದಾಡುವುದು ಯೋಗ್ಯವೇ ಅಲ್ಲ, ಗಲಭೆಗಳು ಜರುಗಿದುದರಿಂದ ಜನರ ದೈನಂದಿನ ಜೀವನಕ್ಕೆ ಅನೇಕ ತೊಂದರೆಗಳಾದವು. ಹಾಲು, ಕಾಯಿಪಲ್ಲೆ, ಹಣ್ಣು, ಕಾಳುಕಡ್ಡಿಗಳೂ ಸಹ ಸುಲಭವಾಗಿ ದೊರೆಯಲಿಲ್ಲ. ಸಿಕ್ಕರೂ ಸಾಕಷ್ಟು ಬೆಲೆ ತೆರಬೇಕಾಯಿತು. ವಿನಾಕಾರಣ ದುಡ್ಡಿನ ವ್ಯಯ, ಸಮಯ ಹಾಳು.

"ಇಂಡಿಯನ್ ಎಕ್ಸ್‌ಪ್ರೆಸ್" ಪತ್ರಿಕೆಯ ವರದಿಗಾರ, ಖ್ಯಾತ ಕವಿ ಶ್ರೀ ಸರಜೂಕಾಟಕರವರ ಪತ್ನಿ ಶ್ರೀಮತಿ ಸುಮಾರವರ ಪ್ರಕಾರ ಅವರು "ಮನುಷ್ಯ ಕುಲವೆಲ್ಲ ಒಂದೇ" ಎಂದು ತಿಳಿದು ನಡೆಯುವವರು. ಮನುಷ್ಯ ಮನುಷ್ಯರಲ್ಲಿ ಸಮಾನತೆ ಇರಬೇಕೆಂದು ಮಾತ್ರ ಬಯಸಿದವರು. ಅದರಿಂದಾಗಿ ಬೆಳಗಾವಿಯಲ್ಲಿಯ ಕೋಮು ಗಲಭೆ ಅವರನ್ನು ಕಂಗಾಲಾಗಿಸಿತು. ಚಿಕ್ಕ ಕಾರಣದಿಂದ ಎದ್ದ ದಂಗೆ ಒಂದು ತಿಂಗಳವರೆಗೂ ಮುಂದುವರಿಯಿತು. ಆಸ್ತಿ ಕಳಕೊಂಡವರು ಜೀವ ಕಳಕೊಂಡವರ ಆಕ್ರಂದನ ನೋಡಲು, ಕೇಳಲು ಅಸಹನೀಯವಾಗಿದ್ದಿತು. ಶಾಲೆ, ಕಾಲೇಜು, ಮಾರುಕಟ್ಟೆಗಳು ಸುಮಾರು ಇಪ್ಪತ್ತು ದಿನಗಳಷ್ಟು ಕಾಲ ಮುಚ್ಚಿದ್ದುದು ಅನೇಕ ಕೀಟಲೆಗೆ ಎಡೆಕೊಟ್ಟಿತು. ಮಕ್ಕಳಿಗೆ ಹಾನಿಯನ್ನುಂಟು ಮಾಡಿತು. ಮನುಷ್ಯನ ಪ್ರಾಣ ಹೀರಿ ಯಾವ ದೇವರನ್ನು ಸುಪ್ರೀತಗೊಳಿಸಲು ಸಾಧ್ಯ? ಯಾವುದೇ ದೇವರು ಇಂಥ ಕೃತಿಯನ್ನು ಅಪೇಕ್ಷಿಸಲಾರ. ಇದೊಂದು ನಾಚಿಕೆಪಡಬೇಕಾದ ಸಂಗತಿ.

**ಉಜ್ವಲ ಜಿ. ಪುಣಜಗೌಡ**
ಬೆಳಗಾವಿ

ಗುಲ್ಬರ್ಗ ಮತ್ತು ಮೈಸೂರು ಜಿಲ್ಲೆಗಳಲ್ಲಿ ಕೆಲಸ ಮಾಡುತ್ತದೆ. ಹಳ್ಳಿಗಳಲ್ಲಿ ಮಹಿಳೆಯರೊಂದಿಗೆ ಸಂವಾದ ಪ್ರಾರಂಭಿಸಿ ಮಹಿಳಾ ಸಂಘಗಳಾಗಿ ರೂಪಿತಗೊಂಡು, ಅಲ್ಲಿಂದ ಮುಂದಕ್ಕೆ ಸಮಸ್ಯೆಗಳನ್ನು ಎತ್ತಿಕೊಂಡು ಮುನ್ನಡೆಯುವುದು ನಮ್ಮ ಕ್ರಮ. ರಾಯಚೂರಿನ ಹಳ್ಳಿಯೊಂದರಲ್ಲಿ ಸುಮಾರು 30 ಜನ ದಲಿತ ಮಹಿಳೆಯರು ಹೀಗೆ ಗುಂಪಾಗಿದ್ದರು. ಇವರಲ್ಲಿ 18-20 ಮಂದಿ ಒಡ ಮುಸಲ್ಮಾನ ಮಹಿಳೆಯರೇ, ಉಳಿದವರು ಹರಿಜನ-ಗಿರಿಜನ ಮಹಿಳೆಯರು. ದಿನಾ ಸಂಜೆ ದೇವಸ್ಥಾನದ ಕಟ್ಟೆಯ ಮೇಲೆ ಮೀಟಿಂಗ್ ಸೇರುವರು. ಇದನ್ನು ಸಹಿಸದ ಗಂಡಸರು ತಡೆ ಮಾಡಲು ಪ್ರಯತ್ನಿಸುವರು. ಇವರು ಮೀಟಿಂಗ್ ಮಾಡುವ ವೇಳೆಗೆ ಅವರು ಕುಡಿದು ಮಲಗುವರು, ಅಲ್ಲಿ. ಮಹಿಳೆಯರಿಗೆ ಏನೂ ಮಾಡಲು ತೋರದೆ ಕೊನೆಗೆ ರಸ್ತೆಯಲ್ಲೇ ಮೀಟಿಂಗ್ ಸೇರತೊಡಗಿದರು. ಆದರೂ ಗಂಡಸರು ಹಿಂದೆ ಕುಳಿತು ಹಾಸ್ಯ ಮಾಡುವರು. ಒಂದು ದಿನ ಮಹಿಳೆಯರು ತಮ್ಮ ಸಂಘವನ್ನು ಉದ್ಘಾಟಿಸಲು ತೀರ್ಮಾನಿಸಿದರು (ಇದೆಲ್ಲ ಇತ್ತೀಚಿನ ಕೋಮು ಗಲಭೆಗಳು ನಡೆಯುತ್ತಿದ್ದ ಸಂದರ್ಭದಲ್ಲೇ ನಡೆದದ್ದು). ಉದ್ಘಾಟನೆಯೆಂದರೆ ಒಂದು ಪೂಜೆ, ಪುರಸ್ಕಾರ, ಹಾಡು-ಹಸೆ ಎಲ್ಲಾ ಆಗಬೇಕು. ಎಲ್ಲಿ ಮಾಡುವುದು ? ಗಂಡಸರು ದೇವಸ್ಥಾನ ಬಿಡರು. ಕೊನೆಗೆ ಗುಂಪಿನಲ್ಲೇ ಹೆಚ್ಚು ಚಿಂತನಾಶೀಲಳಾಗಿದ್ದ 'ಖಾದರ್ ಬೀ' ಮಸೀದಿಯಲ್ಲಿ ಮಾಡೋಣವೆಂದು ಸಲಹೆ ಕೊಟ್ಟಳು. ಮುಲ್ಲನನ್ನು ಕೇಳಿದರು. ಮುಲ್ಲಾ ಸಂತೋಷದಿಂದಲೇ ಮಸೀದಿ ಕ್ಲೀನ್ ಮಾಡಿ ಕೊಟ್ಟ. ಪೆಟ್ಟಿ ಅಂಗಡಿಯವ (ಹಿಂದೂ ಅವನು) ಪೂಜೆಗೆಂದು ಕಡ್ಲೆಪುರಿ ಕೊಟ್ಟ. ಎಲ್ಲಾ ಸೇರಿ ಮಸೀದಿಯಲ್ಲಿ ಸರಸ್ವತಿ ಪೂಜೆ ಮಾಡಿ ಸಂಘವನ್ನು ಉದ್ಘಾಟಿಸಿದರು. ಸಂಭ್ರಮದಿಂದ 'ಪ್ರಸಾದ' ಹಂಚಿದರು. ಕಿರಿಕಿರಿ ಮಾಡುತ್ತಿದ್ದ ಗಂಡಸರೂ ಈ ಸಮಯದಲ್ಲಿ ಭಾಗವಹಿಸಿ 'ಒಳ್ಳೆಯ' ಮಾತನಾಡಿದ್ದರು. ಇದೇ ಸಂದರ್ಭವನ್ನು ಉಪಯೋಗಿಸಿಕೊಂಡು ನನ್ನ ಸಹದ್ಯೋಗಿಗಳಾದ ಮಂಜುಳಾ, ಪರಿಮಳಾ ಇವರುಗಳು ಕೋಮುವಾದ-ಕೋಮು ಗಲಭೆಗಳ ಬಗ್ಗೆ ಪ್ರಸ್ತಾಪ ಮಾಡಿದಾಗ, ಅಲ್ಲಿದ್ದ ಮಹಿಳೆಯರೆಲ್ಲ ತಮಗೆ ಇಂದಿನವರೆಗೂ ಅದರ ಬಗ್ಗೆ ಲಕ್ಷ ಇರಲಿಲ್ಲವೆಂದೂ, ಇನ್ನು ಮುಂದೆಯೂ ತಮಗದು ಬೇಡವೆಂದೂ, ಇಷ್ಟು ದಿನ ತಮ್ಮ ವಿರೋಧಿಗಳಂತಿದ್ದ ಗಂಡಸರೇ ತಮ್ಮ ಬೆಂಬಲಕ್ಕೆ ಬಂದಿರುವಾಗ, ತಾವು ಜತೆಗೂಡಿ ಮುಂದೆ ನಡೆಯುವುದು ತುಂಬಾ ಮುಖ್ಯ ಎಂದು ಹೇಳಿದರು."

ಮೇಲಿನದು ತನ್ನಷ್ಟಕ್ಕೆ ಒಂದು ಘಟನೆ ಮಾತ್ರವಲ್ಲ. ಇದೊಂದು ವ್ಯಾಪಕ ಜೀವನ ಕ್ರಮ ಮತ್ತು ಬಹುಸಂಖ್ಯಾತ ದುಡಿಯುವ ವರ್ಗದ ಮೌಲ್ಯವಾಗಿಯೇ ಕಂಡುಬರುವ ಅಂಶ. ಇದರ ಹೊರಗೆ ನಡೆಯುವ ಯಾವ ಚರ್ಚೆಯೂ ಪೂರ್ಣ ಪ್ರಮಾಣಕ್ಕೆ ಬೆಳೆಯುವುದು ಸಾಧ್ಯವಿಲ್ಲ ಎಂದರೆ ತಪ್ಪಿಲ್ಲವೇನೋ !

**ಕೋಮು ಸೌಹಾರ್ದತೆ ಮತ್ತು ಮಹಿಳೆ:** ಕೋಮುವಾದದ ಕಲ್ಪನೆ ಹೇಗೆ ಪುರುಷಾಧಿಕಾರದ ಸ್ವರೂಪದ್ದೋ, ಹಾಗೆಯೇ ಅದಕ್ಕೆ ಪ್ರತಿರೋಧವಾಗಿ ಕಂಡುಬರುವ ಕೋಮುಸೌಹಾರ್ದತೆಯ ಕಲ್ಪನೆ ಮತ್ತು ಚಟುವಟಿಕೆಗಳು ಕೂಡ ಹೆಚ್ಚು-ಕಮ್ಮಿ ಅಂತದ್ದೇ ಮೌಲ್ಯಗಳನ್ನು ಹೊಂದಿರುವುದು ಸ್ಪಷ್ಟವಾಗುತ್ತದೆ. ಇದನ್ನು ಎರಡು ಹಂತಗಳಲ್ಲಿ ನಾನು ಚರ್ಚಿಸ ಬಯಸುತ್ತೇನೆ. ಮೊದಲನೆಯದಾಗಿ ಜನಪ್ರಿಯ ಕೋಮುಸೌಹಾರ್ದತಾ ಕಾರ್ಯಕ್ರಮಗಳು: ಇದಕ್ಕೆ ಪೂರಕವಾಗಿ down to earth ಪತ್ರಿಕೆಯ ಇದೇ ಫೆಬ್ರವರಿ 28ರ ಸಂಚಿಕೆಯಲ್ಲಿ ಕೋಮು ಸೌಹಾರ್ದತಾ ಚಟುವಟಿಕೆಗಳ ಬಗ್ಗೆ ಪ್ರಕಟವಾದ ಲೇಖನದಲ್ಲಿನ ಒಂದು ಘಟನೆಯನ್ನು ಇಲ್ಲಿ ಬಳಸಿಕೊಳ್ಳುತ್ತೇನೆ. 1992ರ ಜೂನ್ 12ರಂದು ಬಾಗಲ್ಪುರದ ಮೌಲಾನ ಚಾಕ್‌ನಲ್ಲಿ ಹಲವು ದುಷ್ಕರ್ಮಿಗಳು ಮನೆಯೊಂದನ್ನು ಲೂಟಿ ಮಾಡಿ ಮನೆಯಲ್ಲಿ ವಾಸಿಸುತ್ತಿದ್ದ ಮಹಿಳೆಯ ಮೇಲೆ ಅತ್ಯಾಚಾರ ಮಾಡಿದರು. ಇದರಿಂದ ಕಂಗೆಟ್ಟ ಅಲ್ಲಿನ ನಿವಾಸಿಗಳು ಮೌಲಾನಾಚಾಕ್ ವೆಲ್‌ಫೇರ್ ಸೊಸೈಟಿಯೊಂದನ್ನು ರಚಿಸಿಕೊಂಡು ತಮ್ಮ ಪ್ರದೇಶದಿಂದ ಸಮಾಜಘಾತಕ ಶಕ್ತಿಗಳನ್ನು ದೂರವಿಡುವಲ್ಲಿ ಶ್ರಮಿಸುತ್ತಿದ್ದಾರೆ. ಇದರ ಒಂದು ಕಾರ್ಯಕ್ರಮವೆಂದರೆ ಇಲ್ಲಿನ ಎಲ್ಲ ಹಿಂದೂ-ಮುಸಲ್ಮಾನ ಗಂಡಸರು ರಾತ್ರಿಯ ಹೊತ್ತು ಇಲ್ಲಿ ಪಾಳಿಯ ಮೇಲೆ ಪಹರೆ ಕಾಯುತ್ತಾರೆ. ಸಮುದಾಯದ ಪ್ರತೀ ಗಂಡಸು ಈ ಪಹರೆಯನ್ನು ಸಮನಾಗಿ ಹಂಚಿಕೊಳ್ಳಬೇಕು. ಇಲ್ಲದಿದ್ದಲ್ಲಿ ಅವರಿಗೆ ದಂಡ ವಿಧಿಸಲಾಗುತ್ತದೆ. ಇದು ಅಂದಿನಿಂದ ಇಂದಿನವರೆಗೂ ಕ್ರಮಬದ್ಧವಾಗಿ ನಡೆದುಕೊಂಡು ಬಂದಿದೆ.

ಇದೊಂದು ಸುಂದರ ಸಂಗತಿ. ಅದೇ ಸಮಯದಲ್ಲಿ ಈ ಪಹರೆಯ ಕಲ್ಪನೆಯನ್ನು ಸ್ವಲ್ಪ ಸೂಕ್ಷ್ಮವಾಗಿ

# ಬಿ.ಜೆ.ಪಿ.ಯ ರಾಮನಿಂದ ಸೀತೆಗೇನೂ ಉಪಯೋಗವಿಲ್ಲ

ಉತ್ತರ ಭಾರತದ ಹಳ್ಳಿಗಳಲ್ಲಿ ಒಬ್ಬರನ್ನೊಬ್ಬರು ಸಂಧಿಸಿದಾಗ 'ಜೈ ಸಿಯ ರಾಮ್' ಎಂದು ಹೇಳುವುದು ಶತಮಾನಗಳಿಂದಲೂ ವಾಡಿಕೆಯಾಗಿ ಬಂದಿದೆ. ರಾಮ ನಿಷ್ಕಾರಣವಾಗಿ ಸೀತೆಯನ್ನು ದೂರೀಕರಿಸಿದ್ದರೂ ಈ ಜನರ ಮನಸ್ಸಿನಿಂದ ಮಾತ್ರ ಅವರಿಬ್ಬರನ್ನು ಪ್ರತ್ಯೇಕಿಸಲು ಸಾಧ್ಯವಾಗಿಲ್ಲ. ರಾಮ ಆಗೊಮ್ಮೆ ಈಗೊಮ್ಮೆ ತಪ್ಪುಗಳನ್ನು ಮಾಡಿರಬಹುದು, ಆದರೆ ಸೀತೆ ಮಾತ್ರ ಸಂಪೂರ್ಣ ದೋಷಮುಕ್ತಳು. ಹೀಗಾಗಿ ಅವಳೇ ಹೆಚ್ಚು ಪೂಜಿತಳು ಇಲ್ಲ. "ಜೈ ಸಿಯ ರಾಮ್" ಅನ್ನುವಾಗ ಸೀತೆಯ ಹೆಸರೇ ಮೊದಲು ಬರುವುದು ಗಮನಾರ್ಹ.

ಆದರೆ BJP-VHP-RSS ಕೂಟವು ಈ ಸಾಂಪ್ರದಾಯಕ ಹೇಳಿಕೆಯನ್ನು 'ಜೈ ಶ್ರೀರಾಮ್' ಎಂದು ತಿದ್ದುಪಡಿ ಮಾಡುವ ಮೂಲಕ ಸೀತೆಯನ್ನು ಅಳಿಸಿಹಾಕಲು ಪ್ರಜ್ಞಾಪೂರ್ವಕವಾಗಿ ಪ್ರಯತ್ನಿಸಿದೆ. ಇದು ದ್ವೇಷ ಮತ್ತು ರಕ್ತಪಾತಗಳ ಅವರ ರಾಜಕೀಯವನ್ನು ಬೋಧಿಸಲು ಅವರು ಪುನರ್ ಸೃಷ್ಟಿಸಲು ಪ್ರಯತ್ನಿಸುತ್ತಿರುವ ರಾಮನ ವೈವಾಹಿಕ ಕಲ್ಪನೆಗೆ ಸಹಜವಾಗಿಯೇ ಹೊಂದಿಕೊಳ್ಳುತ್ತದೆ. ವಾಲ್ಮೀಕಿ, ತುಳಸಿ ಮತ್ತು ಇತರ ಅನೇಕ ರಾಮಾಯಣಗಳು ಸೃಷ್ಟಿಸುವ ಸೌಮ್ಯ ಮತ್ತು-ಸಪ್ರೇಮ ರಾಮನ ಕಲ್ಪನೆಯಿಂದ ಇವರಿಗೆ ಆಗಬೇಕಾದ್ದೇ ಏನೂ ಇಲ್ಲ.

ಸೀತೆಯೆಡೆಗಿನ ಸಂಘ ಪರಿವಾರದ ಈ ವಿಮುಖತೆ ತುಂಬಾ ಚೆನ್ನಾಗಿ ಅರ್ಥವಾಗುವಂತದ್ದು, ಅರ್ಥವಾಗುತ್ತದೆ. ಗಲಭೆಗಳನ್ನು ಪ್ರಚೋದಿಸುವಲ್ಲಿ, ವಸತಿಗಳನ್ನು ಸುಡುವಲ್ಲಿ, ಸಣ್ಣ ಮಕ್ಕಳನ್ನೂ ಬಿಡದೆ ನಿಷ್ಕಾರಣವಾಗಿ ಜನರನ್ನು ಸಂಬಂಧಿಕರ ಕಣ್ಣೆದುರೇ ಕೊಲ್ಲುವಲ್ಲಿ ಕ್ರಿಯಾಶೀಲರಾಗಿ ತೊಡಗಿಕೊಂಡಿರುವವರಿಗೆ Non macho ರಾಮನಿಂದ ಆಗಬೇಕಾದ್ದು ಏನೂ ಇಲ್ಲ.

ರಾಮನ ಪಕ್ಕದಲ್ಲಿ ಸೀತೆ ಇರುವುದು, ದ್ವೇಷ ಸೂಸುವ ಸಂಘ ಪರಿವಾರದ ಸಿದ್ಧಾಂತಕ್ಕೆ ನಿಜಕ್ಕೂ ಒಂದು ಬೆದರಿಕೆಯೇ. ಏಕೆಂದರೆ ರಾಮನಿಗೆ ಶಾಂತಿಮಂತ್ರವನ್ನು ಬೋಧಿಸಿದವಳೇ ಸೀತೆ. ವಾಲ್ಮೀಕಿ ರಾಮಾಯಣದ ಅರಣ್ಯ ಕಾಂಡದಲ್ಲಿ ರಾಮ ಮತ್ತು ಸೀತೆಯ ನಡುವಿನ ಒಂದು ಮನಮುಟ್ಟುವ ಸಂಭಾಷಣೆಯಿದೆ. ಸೀತೆ ರಾಮನಿಗೆ ಬುದ್ಧಿ ಮಾತು ಹೇಳುವ ಮತ್ತು ಆತನನ್ನು ತಿದ್ದುವ ಒಂದು ಅಪರೂಪದ ಸನ್ನಿವೇಶ ಇದು. ರಾಮನ ವನವಾಸದ ಪ್ರಾರಂಭದ ದಿನಗಳಲ್ಲಿ ದಂಡಕಾರಣ್ಯದ ಋಷಿಗಳು ಅವನನ್ನು ಕಂಡು, ತಮ್ಮನು ಕಾಡುವ ರಾಕ್ಷಸರಿಂದ ಕಾಪಾಡುವಂತೆ ಕೇಳಿಕೊಳ್ಳುತ್ತಾರೆ. ಅವರನ್ನು ಹಿಂಸಿಸುವ ಎಲ್ಲ ರಾಕ್ಷಸರನ್ನು ತಾನು ಧ್ವಂಸ ಮಾಡುವುದಾಗಿ ರಾಮ ಅವರಿಗೆ ಮಾತು ಕೊಡುತ್ತಾನೆ. ಅಂತೆಯೇ ರಾಮ- ಲಕ್ಷ್ಮಣರಿಬ್ಬರೂ ರಾಕ್ಷಸರನ್ನು ಸದೆಬಡಿಯಲು ಸಿದ್ಧರಾಗುತ್ತಾರೆ. ಆದರೆ ರಾಮನ ಈ ನಿರ್ಧಾರದ ಬಗ್ಗೆ ಸೀತೆಗೆ ಸಮ್ಮತಿಯಿಲ್ಲ. ತೀವ್ರ ಕಳವಳದಿಂದ ಆಕೆ ರಾಮನಿಗೆ ಹೇಳುತ್ತಾಳೆ. "ಏನೂ ತಪ್ಪು ಮಾಡದೆ ಇರುವ ಜೀವಿಗಳನ್ನು ಕೊಲ್ಲುವ ನಿರ್ಧಾರವನ್ನು ತೆಗೆದುಕೊಳ್ಳುವ ಮೂಲಕ ನೀನು ಒಬ್ಬ ಅಜ್ಞಾನಿ ಬಳಪಡುಬಹುದಾದಂತಹ ಪಾಪಯುಕ್ತ ಸ್ಥಿತಿಗೆ ತುಂಬಾ ಹತ್ತಿರವಾಗುತ್ತಿರುವೆ.

ಹೇ ನಾಯಕನೇ, ಬಿಲ್ಲುಬಾಣಗಳಿಂದ ಸಜ್ಜಿತನಾಗಿ ಈ ಕಾಡನ್ನು ಮೂಲ ವಾಸಸ್ಥಳವನ್ನಾಗಿ ಉಳ್ಳ ರಾಕ್ಷಸರ ವಿರುದ್ಧ ಯುದ್ಧಸನ್ನದ್ಧನಾಗಿದ್ದಾಗ ತಪ್ಪು ಮಾಡಿಲ್ಲದೇ ಇರುವವರನ್ನೂ ನೀನು ವಿವೇಚನೆಯಿಲ್ಲದೆ ಕೊಲ್ಲಬಹುದು...."

ಅದೇನೇಯಿದ್ದರೂ ಸೀತೆಯ ಆಲೋಚನೆಗೆ ರಾಮ ಮೆಚ್ಚಿಗೆ ಸೂಸುವನಾದರೂ ಋಷಿಗಳಿಗೆ ಮಾತು ಕೊಟ್ಟ ನಂತರ ಹಿಂದೆಗೆಯುವುದು ತಾನು ಬದುಕಿರುವವರೆಗೂ ಸಾಧ್ಯವಾಗದ ಮಾತು ಎಂದು ಅವನೆಂದುಕೊಳ್ಳುತ್ತಾನೆ.

ಸಂಘ ಪರಿವಾರವು ರಾಮನ 'ಮರ್ಯಾದಾ ಪುರುಷ' ಕಲ್ಪನೆಯಿಂದ ಎಷ್ಟು ದೂರ ಹೋಗಿದೆ ಎಂದು ನಾವು ನೋಡಿದ್ದೇವೆ. ಕಲ್ಯಾಣಸಿಂಗ್ ಸರಕಾರ ಬಾಬ್ರಿ ಮಸೀದಿಯನ್ನು ರಕ್ಷಿಸುತ್ತದೆಯೆಂದು ಸುಪ್ರಿಂ ಕೋರ್ಟಿನ ಮುಂದೆ ಅದು ಪ್ರಮಾಣ ಮಾಡಿತು. ಆದರೂ ಅದು ತನ್ನ ಗೂಂಡಾಗಳನ್ನು ಎಷ್ಟು ಸಡಿಲಬಿಟ್ಟಿತೆಂದರೆ ಅವರು ಮಸೀದಿ ಒಡೆದದ್ದು ಮಾತ್ರವಲ್ಲ ಅಯೋಧ್ಯೆ ಮತ್ತು ದೇಶದ ಬೇರೆ ಬೇರೆ ಭಾಗಗಳಲ್ಲಿ ಮುಸಲ್ಮಾನರ ಮನೆಗಳನ್ನು ಕೊಳ್ಳೆಹೊಡೆದರು, ಸುಟ್ಟು ಹಾಕಿದರು. ಪರಿಸ್ಥಿತಿ ಹೀಗಿರುವಾಗ ತಪ್ಪು ಮಾಡಿದವರನ್ನು ವಿವೇಚನೆಯಿಲ್ಲದೆ ಕೊಲ್ಲಲು ಅವಕಾಶ ಕೊಟ್ಟು ಕೊಳ್ಳಕೂಡದೆಂದು ರಾಮನನ್ನು ಎಚ್ಚರಿಸುವ. ಸೀತೆಯನ್ನು ರಾಮನೊಂದಿಗೆ ಒಂದಾಗಿರಲು ಬಿಡದೇ ಇರುವುದರಲ್ಲಿ ಆಶ್ಚರ್ಯವಾದರೂ ಏನಿದೆ? ಸಂಘ ಪರಿವಾರದವರ ರಾಮನಿಗೆ ತಕ್ಕ ಹೆಂಡತಿಯ ಕಲ್ಪನೆಯೆಂದರೆ, ಹಿಂದೂಗಳಲ್ಲಿ ದ್ವೇಷದ ಬೀಜ ಬಿತ್ತುತ್ತಾ ಮುಸಲ್ಮಾನರೆಡೆಗೆ ವಿವೇಚನರಹಿತ ಹಿಂಸೆಗೆ ಅವರನ್ನು ಪ್ರಚೋದಿಸುವ ಸಾಧ್ವಿ ರಿತಾಂಬರೆ ಉಮಾಭಾರತಿಯಂತಹ ನಂಜುಕಾರುವ ಹೆಂಗಸರು. ಸೀತೆಯ ಮಾತುಗಳನ್ನು ಸಾಧ್ವಿ ರಿತಾಂಬರೆಯ ಭಾಷಣದ ಒಂದು ಭಾಗದೊಂದಿಗೆ ಹೋಲಿಸಿ ನೋಡಿದಾಗ ವೈರುಧ್ಯ ರಾಚುತ್ತದೆ: " ಅವರಿಗೆ (ಮುಸಲ್ಮಾನರು) ನಾವು ಮಾತಿನಿಂದ ಕಲಿಸುವುದು ಸಾಧ್ಯವಿಲ್ಲ, ಒದೆ ಕೊಟ್ಟೇ ಕಲಿಸೋಣ....ಒಂದೇ ಬಾರಿಗೆ ರಕ್ತದ ಹೊಳೆ ಹರಿಯಲಿ...."

ಹಿಂದೂಕೃತವಾದಿಗಳು : ಭಾರತದ ಮಹಿಳೆಯರ ಮುಂದೆ ತರುತ್ತಿರುವ ಸ್ತ್ರೀತ್ವದ ಪೈಶಾಚಿಕ ಸ್ವರೂಪಿ ಆದರ್ಶದ ಕಲ್ಪನೆ ಇದು. ದುರ್ಗಾವಾಹಿನಿಯಲ್ಲಿ ಮಹಿಳೆಯನ್ನು ಅವರು ಸಂಘಟಿಸುತ್ತಿರುವ ರೀತಿ ಕೂಡ, ದುಷ್ಟನಾಶಿನಿ ದುರ್ಗೆಯ ಸಾಂಪ್ರದಾಯಕ ಶಕ್ತಿಶಾಲೀ ಕಲ್ಪನೆಯ ಇನ್ನೊಂದು ವಿರೂಪಗೊಂಡ ಬಳಕೆಯಾಗಿದೆ.

ತಾವು ಆರಾಧಿಸುವ ದೇವತೆಗಳ ಕ್ರಿಯೆಗಳನ್ನು ತೀರ್ಮಾನಿಸುವ ಅವಕಾಶವನ್ನು ಭಕ್ತರು ಹೊಂದಿರುವಂತಹ ಒಂದು ವಿಶಿಷ್ಟ ಕ್ರಮ ಹಿಂದೂ ಧರ್ಮದಲ್ಲಿದೆ. ಹೀಗಾಗಿ ಅದ್ವಾನಿ ಮತ್ತು ಸಂಗಡಿಗರು ತಮ್ಮ Manipulation ಗಳ ಜತೆ ಬಹುದೂರ ಹೋಗಲಾರರು. ಸಂಘಪರಿವಾರದ ರೀತಿ—ನೀತಿಗಳಿಗೆ, ಮುಸಲ್ಮಾನರಿಗಿಂತ ಹೆಚ್ಚಾಗಿ ಹಿಂದೂಗಳಿಂದಲೇ ಬಲವಾದ ವಿರೋಧದ ದನಿ ಏಳುತ್ತದೆ. ಏಕೆಂದರೆ ಅವರು ನಮ್ಮ ಸಂಸ್ಕೃತಿಯ ಮೂಲ ಸತ್ವವನ್ನೇ ನಾಶಮಾಡುತ್ತಿದ್ದಾರೆ.

(The Times of India January 28, 1993.) — ಮಧು ಕೀಶ್ವಾರ್

ಗಮನಿಸಿದರೆ, ತಮ್ಮ ಕುಟುಂಬ-ಸಮುದಾಯ-ಕೋಮು ಗಳ ಘನತೆಯ ಪ್ರತೀಕವಾದ ತಮ್ಮ ಮಹಿಳೆಯರ ಪರಿಶುದ್ಧತೆಯನ್ನು ಕಾಪಾಡಿಕೊಳ್ಳುವುದಕ್ಕಾಗಿ ರಕ್ಷಿಸಿಟ್ಟು ಕೊಳ್ಳಲಿಕ್ಕಾಗಿ ಇಲ್ಲಿನ ಗಂಡಸರು ಕಾವಲು ಕಾಯುವುದು ಕಂಡು ಬರುತ್ತದೆ. ವ್ಯತ್ಯಾಸವೆಂದರೆ ಹಿಂದೂ-ಮುಸಲ್ಮಾನ ಗಂಡಸರೆಲ್ಲಾ ಒಟ್ಟಾಗಿ ಸೌಹಾರ್ದದಿಂದ ಈ ಕೆಲಸವನ್ನು ಮಾಡುತ್ತಾರೆ.

ಇನ್ನೊಂದು ಹಂತದಲ್ಲಿ ಮತೀಯವಾದಿಗಳ ಪೊಳ್ಳು ತನವನ್ನು, ಅವರು ಹುಟ್ಟುಹಾಕುವ ಹುಸಿಪ್ರಜ್ಞೆಯನ್ನು ಬಯಲು ಮಾಡುವ, ಆ ಮೂಲಕ ಜನ-ಜನರ ಮಧ್ಯೆ ಪ್ರೀತಿಪೂರ್ಣ ಬೆಸುಗೆಯನ್ನು ತರುವ ಉದ್ದೇಶವನ್ನು ಇಟ್ಟುಕೊಂಡು, ಮುಖ್ಯವಾಗಿ ಪಟ್ಟಣಗಳಲ್ಲಿ ವಿಚಾರ ವಂತರ ಗುಂಪುಗಳು ಕೆಲವು ಚಟುವಟಿಕೆಗಳನ್ನು ಹಮ್ಮಿ ಕೊಳ್ಳುತ್ತಿವೆ. ಇಂತಹ ಚರ್ಚೆಗಳಲ್ಲಿ ಕೂಡ gender aspectsನ ಬಗ್ಗೆ ಎಚ್ಚರಿಕೆಯಿಂದಿರುವ ಪ್ರಯತ್ನಗಳು ಇಲ್ಲದಿರುವುದು ವಿಷಾದದ ಸಂಗತಿ. ಉದಾ: ಪ್ರೊ. ಅನಂತಮೂರ್ತಿಯವರು ಇಂತಹ ವೇದಿಕೆಯೊಂದರಲ್ಲಿ ಮಾತನಾಡುತ್ತಾ (ಸಂದರ್ಭ: ಶೂದ್ರ ಪತ್ರಿಕೆ ಇದೇ ಫೆಬ್ರುವರಿ 27/28ರಂದು ನಡೆಸಿಕೊಟ್ಟ ಧರ್ಮಸಂವಾದ) "ನಮ್ಮನ್ನು ನಾವು ಸುಟ್ಟುಕೊಳ್ಳುವಂತಹ 'ಸತಿ'ಯನ್ನು ಖಂಡಿಸಲಾಗದೇನೋ" ಎಂಬರ್ಥದ ಮಾತನಾಡಿದ್ದಾರೆ. ಹಿಂದೆ O.V ವಿಜಯನ್ ಪುತ್ರಕಾಮೇಷ್ಟಿಯ ಬಗ್ಗೆ ಇಂತದ್ದೇ ಮಾತುಗಳನ್ನಾಡಿದ್ದನ್ನು ಇಲ್ಲಿ ನೆನಪಿಗೆ ತಂದು ಕೊಳ್ಳಬಹುದು. ಇಂತಹ ಮಾತುಗಳನ್ನಾಡುವ ಸಂದರ್ಭ ವೇನೇಯಿದ್ದರೂ ಲಿಂಗಭೇದದ ಬಗ್ಗೆ ಎಚ್ಚರಿಕೆಯಿಂದಿ ದ್ದಾಗ ಈ ಬಗೆಯ Passing statementಗಳು ಹೊರಬರಲಾರವು.

ಇವೆಲ್ಲಾ ಒಂದು ಕಡೆಗಾದರೆ ಇನ್ನೊಂದು ಕಡೆಯಲ್ಲಿ ರಾಜ್ಯಾಂಗ ತನ್ನ ಪಿತೃಪ್ರಧಾನ ಸಂರಚನೆಯನ್ನು ಕಾಪಾಡಿ ಕೊಳ್ಳಲು ಧರ್ಮವನ್ನು ಬಳಸಿಕೊಳ್ಳುತ್ತಿದೆ. ಮೂರನೇ ವಿಶ್ವ ರಾಷ್ಟ್ರಗಳಲ್ಲಿ ಸೆಕ್ಯುಲರಿಸಂ ಅನ್ನುವುದು ರೂಪು ಗೊಂಡ ಪ್ರಕ್ರಿಯೆ ಪಶ್ಚಿಮದಲ್ಲಿಗಿಂತ ಭಿನ್ನ. ಪಶ್ಚಿಮದಲ್ಲಿ ಬಂಡವಾಳಶಾಹಿಯ ಹುಟ್ಟಿನ ಜತೆಗೆ ಚರ್ಚ್ ಮತ್ತು ರಾಜ್ಯಾಂಗಗಳ ನಡುವೆ ಸಂಪೂರ್ಣ ಪ್ರತ್ಯೇಕತೆ ಏರ್ಪಟ್ಟಿತು. ಸೆಕ್ಯುಲರಿಸಂ ಜತೆಗೆ ಲಿಬರಲಿಸಂ ತಲೆ ಎತ್ತಿತು. ಸುಮಾರು 300 ವರ್ಷಗಳ ಕಾಲ ಈ ಪ್ರಕ್ರಿಯೆ ನಡೆಯಿತು. ನಮ್ಮಲ್ಲಿ ಇಂತಹ ಪ್ರಕ್ರಿಯೆ ಉಂಟಾಗ ಲಿಲ್ಲ. 'ಸ್ಟೇಟ್' ಮತ್ತು 'ಸೆಕ್ಯುಲರಿಸಂ' ತಮ್ಮಪಾಶ್ಚಾತ್ಯ ಮಾದರಿಯಲ್ಲಿ ವಸಾಹತುಶಾಹಿಗಳಿಂದ ಇಲ್ಲಿ ಅಳವಡಿಸ ಲ್ಪಟ್ಟಿತು. ಹೀಗಾಗಿ ನಮ್ಮಲ್ಲಿ ಇಂದು ಸಮಾಜದಲ್ಲಿ ಯಾವುದೇ ಬದಲಾವಣೆಯಾಗದ 'ಸೆಕ್ಯುಲರ್ ಸ್ಟೇಟ್'ನ ಕಲ್ಪನೆ ಇದೆ (ರಮಾ ಮೇಲ್ಕೋಟೆ, Women and religion) ಹೀಗಾಗಿ ಇಂದು ಯಾವುದೇ ಧರ್ಮದ ಮಹಿಳೆ ತನ್ನ ಹಕ್ಕುಗಳ ರಕ್ಷಣೆಗಾಗಿ ನ್ಯಾಯಾಲಯದ ಕಟ್ಟೆ ಹತ್ತಿದರೆ ಅವಳನ್ನು ಹಿಂದೂ ವಿರೋಧೀ, ಇಸ್ಲಾಂ ವಿರೋಧೀ, ಕ್ರೈಸ್ತ ವಿರೋಧೀ ಎಂದೇ ನೋಡಲಾಗು ತ್ತದೆ. ಹೀಗಾಗುವುದರಿಂದಲೇ ಮತೀಯವಾದೀ ಗುಂಪು ಗಳು ಮಹಿಳೆಯರ ಸಮಾನತೆಯ ಹಕ್ಕುಗಳ ಬಗ್ಗೆ ಮಾತನಾಡುತ್ತಲೇ ಮಹಿಳೆಯರನ್ನು ಪುರುಷರಿಂದ, ಹಿಂದೂ ಮಹಿಳೆಯರನ್ನು ಮುಸಲ್ಮಾನ ಮಹಿಳೆಯರಿಂದ ಪ್ರತ್ಯೇಕಿಸುತ್ತ ಒಡಕು ತರುವ ಕೆಲಸವನ್ನು ಸಾರಸಗಟಾಗಿ ಮಾಡುತ್ತಿರುತ್ತವೆ. ಅಧಿಕಾರಕ್ಕೆ ಬಂದರೆ ಸ್ತ್ರೀಪರ ಚಟುವಟಿಕೆಗಳನ್ನು ಕಾರ್ಯಕ್ರಮಗಳನ್ನು ನಿಷೇಧಿಸುತ್ತವೆ (ಹಿಂದೆ ಉತ್ತರ ಪ್ರದೇಶದಲ್ಲಿ BJP ಸರಕಾರ ಇದ್ದಾಗ ಸ್ತ್ರೀವಾದೀ ನೀತಿ-ಮೌಲ್ಯಗಳನ್ನೇ ಆಧರಿಸಿ ಕಾರ್ಯಾ-ಚರಣೆಯಲ್ಲಿದ್ದ ಮಹಿಳಾ ಕಾರ್ಯಕ್ರಮವೊಂದನ್ನು ಅದು 'ಹಿಂದೂ ನಾರಿ'ಯ ಕಲ್ಪನೆಗೆ ಸ್ವಲ್ಪವೂ ಹೊಂದಿಕೊಳ್ಳದ ಕಾರಣ ತಕ್ಷಣ ನಿಲ್ಲಿಸಬೇಕೆಂದು ಮುಖ್ಯಮಂತ್ರಿ ಕಲ್ಯಾಣ ಸಿಂಗ್ ಸಾರ್ವಜನಿಕವಾಗಿ ಹೇಳಿಕೆ ಕೊಟ್ಟಿದ್ದರು.)

ಪರಿಸ್ಥಿತಿ ಹೀಗಿರುವಾಗ, ನಾವು ಮಹಿಳೆಯರು ಹೇಗೆ ಪ್ರತಿಕ್ರಿಯಿಸಬೇಕಾಗುತ್ತದೆ. ಸಮುದಾಯಗಳನ್ನು ಒಂದು ಗೂಡಿಸುವುದು ತತ್ಕ್ಷಣದ ಪ್ರಶ್ನೆಯಾಗಿರುವಾಗ ಮಹಿಳೆ ಯರು ಲಿಂಗ ಪ್ರಶ್ನೆಯನ್ನು ಎತ್ತಬೇಕೆ? ಅಥವಾ ಸುಮ್ಮನೇ ಕೋಮು ಸೌಹಾರ್ದತೆಗೆ ಹಸ್ತ ಜೋಡಿಸಿ ಒಮ್ಮೆ ಇಂತಹ ಸೌಹಾರ್ದತೆ ಉಂಟಾದಾಗ ಎಲ್ಲಾ ಸಮುದಾಯಗಳೊಳಗೆ ಮಹಿಳೆಯರ ಸ್ಥಿತಿ-ಗತಿ ಕುರಿತ ಸಂಘರ್ಷಣೆ ಹೇಗೋ ಪರಿಹಾರ ಕಂಡುಕೊಳ್ಳುತ್ತದೆ ಎಂದು ಸುಮ್ಮನಿರಬೇಕೆ? (ಕಲ್ಪನಾ ಶರ್ಮ, ಹಿಂದೂ ಮಾರ್ಚ್ 7, 93). ಹೀಗೆ ಅಂದುಕೊಂಡು ಬಿಡುವುದು ಸಾಧ್ಯವಾಗದ ಮಾತು. ಶಾಂತಿ-ಸೌಹಾರ್ದತೆಯಲ್ಲಿ ಪಾಲುಗೊಳ್ಳುವುದರ ಜತೆಗೆ ಅದರೊಳಗೂ ಲಿಂಗ ಪ್ರಶ್ನೆ ಯನ್ನು ಎತ್ತುವುದು ತುಂಬಾ ಮುಖ್ಯವಾಗುತ್ತದೆ.

ಕೋಮುವಾದೀ ಗುಂಪುಗಳ ಪೊಳ್ಳುತನವನ್ನು ವ್ಯವಸ್ಥಿತವಾಗಿ ಬಯಲು ಮಾಡುವುದು ಬಹಳ ಮುಖ್ಯ. ಹಿಂದೂ ಧರ್ಮದ ಹೆಸರಿನಲ್ಲಿ ಅವರು ಕಟ್ಟಿಕೊಡುವ ಹೆಣ್ಣಿನ ಮಾದರಿಗಳ ಅಪಾಯವನ್ನು ಬಯಲು ಮಾಡಬೇಕಾಗುತ್ತದೆ. ಇಂತಹ ಸಣ್ಣ ಪ್ರಯತ್ನಗಳು ನಡೆಯುತ್ತಿದ್ದರೂ ಅದನ್ನು ವ್ಯಾಪಕವಾಗಿ ನಡೆಸಬೇಕಾಗಿರುವುದು ತುಂಬಾ ಅವಶ್ಯಕ (Box ಎರಡರಲ್ಲಿರುವ ಮಧು ಕೀಶ್ವಾರ್ ಬರಹ ನೋಡಿ). ಮಧು ಕೀಶ್ವಾರ್ ಈ ಬರಹ ಅಂತಹ ದಿಕ್ಕಿನಲ್ಲೊಂದು ಗಮನಾರ್ಹ ಪ್ರಯತ್ನ.

ಎರಡನೆಯದಾಗಿ ಕೋಮುವಾದಿ ಗುಂಪುಗಳ ದಾರಿ ತಪ್ಪಿಸುವ ಸಮಾನ ಹಕ್ಕುಗಳ ಕಲ್ಪನೆಯನ್ನು ಬಯಲು ಮಾಡುವುದು ಮುಖ್ಯವಾಗುತ್ತದೆ. ಉದಾಹರಣೆಗೆ, ಶಾಬಾನು ಕೇಸಿನ ಸಂದರ್ಭದಲ್ಲಿ BJP ಯು ಯುನಿಫಾರಂ ಸಿವಿಲ್ ಕೋಡನ್ನು ಬೆಂಬಲಿಸಿತು. ಇದು ಸ್ತ್ರೀವಾದೀಗಳು ಮತ್ತು ಪ್ರಗತಿಪರರು ತೆಗೆದುಕೊಂಡ ನಿಲುವೇ ಆಗಿತ್ತು. ಆದರೆ BJP. ಯ ಅರ್ಥೈಸುವಿಕೆ ಇಲ್ಲಿ ಬೇರೆಯೇ ಇತ್ತು. ಇದು ಮಹಿಳೆಯರ ಸಮಾನತೆಯ ಹಕ್ಕುಗಳನ್ನು ಬೆಂಬಲಿಸುವುದಕ್ಕಿಂತ ಹೆಚ್ಚಾಗಿ ಅಲ್ಪ ಸಂಖ್ಯಾತ ಸಮುದಾಯವನ್ನು ಆಕ್ರಮಣ ಮಾಡುವ ರೀತಿಯಾಗಿತ್ತು. ಎಲ್ಲಾ ಮಹಿಳೆಯರೂ ಸಮಾನರು ಎಂದು ಬಿ.ಜೆ.ಪಿ ಹೇಳುವಾಗ ಅವರು ಪುರುಷರಿಗೆ ಸಮಾನರಲ್ಲ ಎಂಬಂಶದ ಬಗ್ಗೆ ಅದು ಸ್ಪಷ್ಟವಾಗಿಯೇ ಇತ್ತು. ತಮ್ಮ ಸಮುದಾಯದೊಳಗೆ ಮಹಿಳೆಯರನ್ನು ಸರಿಯಾಗಿ ನಡೆಸಿಕೊಳ್ಳುತ್ತಿಲ್ಲವೆಂಬಲ್ಲಿ ಬಿ.ಜೆ.ಪಿ ಮುಸಲ್ಮಾನರನ್ನು ಖಂಡಿಸಿತ್ತು. ಆದರೆ ತಮ್ಮದೇ ಸಮುದಾಯದಲ್ಲಿ ಮಹಿಳೆಯರ ಉನ್ನತಿಗೆ ಏನನ್ನೂ ಮಾಡಲಿಲ್ಲ. ಇಲ್ಲಿ ಸಮುದಾಯಗಳನ್ನು ಒಡೆಯಲು ಬಿ.ಜೆ.ಪಿ ನಡೆಸಿದ ಕುತಂತ್ರವನ್ನು ತನ್ಮೂಲಕ ಹಿಂದೂ-ಮುಸಲ್ಮಾನ ಮಹಿಳೆಯರ ಮಧ್ಯೆ ಒಡಕನ್ನು ಉಂಟುಮಾಡುವಲ್ಲಿನ ಪ್ರಯತ್ನವನ್ನು ನಾವು ಬಯಲು ಮಾಡಬೇಕಾಗುತ್ತದೆ.

ಅದೇ ಸಂದರ್ಭದಲ್ಲಿ ನಮ್ಮೊಳಗೆ ತಾನೇ ತಾನಾಗಿ ಇರುವಂತಹ ಸೌಹಾರ್ದತೆಯನ್ನು (ಹಿಂದೆ ಹೇಳಿದ ರಾಯಚೂರಿನ ಹಳ್ಳಿಯ ಪ್ರಕರಣದ ರೀತಿಯಲ್ಲಿ) ಎಚ್ಚರಿಕೆಯಿಂದ ಉಳಿಸಿ ಕಾಪಾಡಿಕೊಂಡು ಬೆಳಸಬೇಕಾಗಿರುವುದು ನಮ್ಮೆಲ್ಲರ ರೀತಿಯಾಗಬೇಕಾಗುತ್ತದೆ. ●

# ಬದುಕೋಣ ನಿಶ್ಚಿಂತೆ

ಮತ್ತೆ ಮತ್ತೆ ನೆನಪಾಗುತ್ತದೆ
ಕರಿಮಣ್ಣು ನೆಲದಲ್ಲಿ ಮರದ ನೇಗಿಲು
ಹೂತು ನಿಂತಿದೆ
ರಾಗಿ ಬಿತ್ತನೆಯ ಹೊಲದ ದ್ಯಾವ ಮೂಲೆಯಲ್ಲಿ
ಸಗಣಿಯ ಪಿಳ್ಳಾರಾಯ ಪೂಜೆಗೊಂಡಿದ್ದಾನೆ.
ಯಾಕೂಬಾ ಕಾಸೀಮರು ಕೊರಳುಬಗ್ಗಿಸಿ
ಭೂತಾಯ ಪೂಜೆಯ ಪ್ರಸಾದ ಕೊಬ್ಬರಿಸಿಹಿ
ಎಳ್ಳು ನೆನೆದಕ್ಕಿ ಕಣ್ಣಿಗೊತ್ತಿ ಬಾಯಿಗೆಸೆದು
ಸಾಲು ನೇಗಿಲ ಹಿಂದೆ ಕಾಳುಬಿತ್ತಿ ಮುನ್ನಡೆಯುತ್ತಾರೆ.

ಹೀಗೆಯೇ ನೆನಪಾಗುತ್ತದೆ
ನಡುಮನೆಯ ತೊಲೆಗಂಭದ ಮಣೆಯ
ಅರಿಸಿನ ಕುಂಕುಮ ವಿಭೂತಿ ಸಿಂಗಾರದಲ್ಲಿ
ಶಿವಪಾರ್ವತಿ ಮತ್ತೆ ರಾಮ ಲಕ್ಷ್ಮಣ ಸೀತೆ
ಕರದಲ್ಲಿ ಗುಡ್ಡ ಹೊತ್ತ ಹನುಮಂತ
ಅಲಮೇಲ ಮಂಗಳ ಮುನಿಸಿ ನಲೆಯ
(ಬೀಬಿ ನಾಚಾರಳ ತೊಡೆಯಲ್ಲಿ ವಿರಮಿಸಿದ ?)
ತಿರುಪತಿ ಎಂಕಟ್ರೋಣಸ್ವಾಮಿ
ಪಟದ ಸರಾಳಿವಳಿ ಕೆಳಗೆ ಸಂಕ್ರಾತಿ ಸುಗ್ಗಿ
ಹುಗ್ಗಿಯ ನೈವೇದ್ಯಕೆ ನಮಿಸಿ ಬಾಗಿದರು
ವರುಷದುದ್ದ ಬೆವರು ಸೋಸಿದ
ನಸೀಬಾ, ಸಕೀನಾ ಬೂಬಮ್ಮರು

ಮನಸೊಳಗೆ ನುಲುಮುತ್ತಾಳೆ
ಅಂಗಳದಲ್ಲಿ ಹಗಲೆಲ್ಲಾ ರಾಗಿಬೀಸಿ
ಭತ್ತ ಮೂಟೆ, ಬೇಳೆ ಉಜ್ಜಿದ ಮುಮ್ತಾಜಜ್ಜಿ
ಊರದ್ಯಾವರಕೆ ಸಜ್ಜಾದ ಮಾರಮ್ಮನ
ಊರಬಾಗಿಲ ಶಾಂತಿ ಸಲಮುದ್ದಿಗೆ
ಕಣ್ಣುಮುಚ್ಚಿ ಪಿಟಪಿಟನೆ ಬಾಯಲ್ಲಿ
ಯಾಖುದಾ, ಶಿವ ಶಿವ ಎಂದು ಕೆನ್ನೆಗೆ ಬಡಿದ
ರಜಾಕು ಅನ್ಸರ್ರು ಮನಸಾ ಬೇಡುತ್ತಾರೆ
ದವಸ ತುಂಬಿ ಕಣಜಗಳು ಬರಿದಾಗದಿರಲಿ
ನಮ್ಮೂರ ಹೊಟ್ಟೆಗಳು ತಂಪಾಗಿರಲಿ

ಹೀಗೂ ಆಗಿತ್ತಲ್ಲ ಅತ್ತೆ ಹೊಟ್ಟೆಯಲ್ಲಿ
ಗಾಳಿ ಸೇರಿದಾಗ,
ಮುಳಬಾಗಿಲು ಮುರಗಮಲ್ಲ
ಉರುಸು ಗೋರಿಗಳಿಗೆ ಹರಕೆ ಹೊತ್ತು
ಬೂಂದಿಕಾಳು ಸಕ್ಕರೆ ಮಂತ್ರಿಸಿದ ಕ್ಷಣಕೆ
ದೆವ್ವ ದೌಡಾಯಿಸಿತಲ್ಲಾ

ತಮ್ಮ ಶಂಕರ ತೋಪಿನ ನಡುಗಡ್ಡೆಯಲ್ಲಿ
ಬಿದ್ದು ಕಕ್ಕಾಬಿಕ್ಕಿ ಬೆದರಿನಿಂತಾಗ
ನಮ್ಮೂರ ಮುಲ್ಲಿ ಘೌಸಾಬು ಮಣಮಣ
ಮಂತ್ರದಲಿ ಕೆಂಪುವಸ್ತ್ರ ನಿವಾಳಿಸಿದಾಗ
ತರತರಿಸಿದ ಭೂತ ಮತ್ತೆ ತೋಪಿಗೇ ಓಡಿತ್ತಲ್ಲ

ಕಿವಿಯಲ್ಲಿ ಮಾರ್ದನಿಸುತ್ತಿದೆ
ಹಸ್ಸೇನು, ಹುಸ್ಸೇನು, ಹೈರೆ ರಾಮ ಹೈರೇ ರಾಮ
ಕುಂಬಾರ ಮುನಿರಾಮನಸುದ್ದೆ ಪಟ್ಟೆಯ ಐಲುವ್ಯಾಪಿ
ನಡುಚಾವಡಿಯ ಬಾಬಯ್ಯನ ಗುಡಾರ
ತಣಮಿಣ ಸುನೇರಿ ಸರಪರ ಬಾವುಟಗಳಲಿ
ಚಂದ್ರ ನಕ್ಷತ್ರ ಲೋಕ
ಅಗ್ನಿಗುಂಡದ ಸುತ್ತ ಊರಮಕ್ಕಳ ಜಾತ್ರೆ
ಮೊಹರಮ್ಮಿನ ಸಡಗರದ
ಕೇಳಿಕೆ ಕೋಲಾಟ ಕರಗ ಹುಲಿವ್ಯಾಷ
ಮನೆ ಮನೆ ದೊಡ್ಡಿ ತಡಿಕೆ ಬಾಗಿಲುಗಳೆಲ್ಲಾ
ಧೂಳು ಮುಸುಕಿದ ಕುಣಿತ ಖುಷಿ ಪರಿಷೆ

ಅಯ್ಯೋ ದ್ಯಾವರೆ ಅಲ್ಲಾಹು ಮಹಮ್ಮದರೆ
ನಮ್ಮೊಳಗೆ ಬೇಡಯ್ಯಾ ರಕ್ಕಸ ಕುಣಿತ
ಸುರಿಯಿರಿ ತಣ್ಣೀರ ಕೊಡಕೋಡಿ
ಭುಗಿಲೆದ್ದ ಯಜ್ಞದ ಪಾಪಪಿಪಾಸಿಗೆ
ತಣ್ಣಗೆ ಬದುಕೋಣ ಅನುಗಾಲ ಸಂದಂತೆ

ಉತ್ತನೂರು ರಾಜಮ್ಮ ವಿ. ಶೆಟ್ಟಿ
ಚಿಂತಾಮಣಿ

# ಸ್ತ್ರೀವಾದಿ ಸಂವೇದನೆಗೆ ಅಭಿವ್ಯಕ್ತಿ

**"ಮತ್ತೆ ಬರೆದ ಕತೆಗಳು"—ನೇಮಿಚಂದ್ರ**
**ಶ್ರೀ ಪ್ರಕಾಶನ, ಬೆಂಗಳೂರು, ರೂ. 30**

ಆಧುನಿಕ ಕನ್ನಡ ಸಾಹಿತ್ಯದಲ್ಲಿ ನೇಮಿಚಂದ್ರ ಅವರು ತಮ್ಮ ಕತೆ, ನೀಳ್ಗತೆಗಳಲ್ಲಿ ಸ್ತ್ರೀವಾದಿ ಸಂವೇದನೆಗೆ ಅಭಿವ್ಯಕ್ತಿ ನೀಡುತ್ತಿದ್ದಾರೆ. 'ಮತ್ತೆ ಬರೆದ ಕತೆಗಳು', ಅವರ ಎರಡನೆಯ ಕಥಾ ಸಂಕಲನ. ಈ ಸಂಕಲನದಲ್ಲಿರುವ ಆರು ಕತೆಗಳು ನಾಡಿನ ಬೇರೆ ಬೇರೆ ಪತ್ರಿಕೆಗಳಲ್ಲಿ ಈಗಾಗಲೇ ಪ್ರಕಟವಾಗಿದೆ.

ಸಮಾಜದಲ್ಲಿ ಹಾಸುಹೊಕ್ಕಾಗಿರುವ ಪಿತೃಪ್ರಧಾನ ಮೌಲ್ಯಗಳು. ಈ ಮೌಲ್ಯಗಳನ್ನು ಪ್ರಶ್ನಿಸುವ ಪ್ರಕ್ರಿಯೆಯಲ್ಲಿ ಗಟ್ಟಿಯಾಗಿ ಹೊರಹೊಮ್ಮುವ ಇವರ ಕತೆಗಳ ಪಾತ್ರಗಳು ಮಾನಸಿಕ ದಾಸ್ಯದ ವಿಮೋಚನೆಯ ಪ್ರತೀಕಗಳಾಗುತ್ತವೆ.

'ಕಪ್ಪು ಮೋಡ, ಬೆಳ್ಳಿ ಅಂಚು' ಕತೆಯ ಮಧು ಯೋಚಿಸುವುದು ಹೀಗೆ, "ಮುಗುಳ್ನಕ್ಕೆ ಮೊದಲ ಬಾರಿಗೆ ಸ್ವಾತಂತ್ರ್ಯದ ಅನುಭವವಾಯಿತು. ಏಕಾಂತ ನಾ ಕಲ್ಪಿಸಿದಷ್ಟು ಅಸಹನೀಯವಿರಲಿಲ್ಲ. ಸ್ವಲ್ಪ ಸ್ವಲ್ಪವಾಗಿ ಸಹ್ಯವಾಗುತ್ತಾ, ಆಪ್ತವಾಗತೊಡಗಿತು. 'ನನಗೆ ಸ್ವತಂತ್ರ ಕೊಡು' ಅಂದಿದ್ದ ಅವ, ಅವನ ನೆನಪು-ಅಪರಾಧಿ ಪ್ರಜ್ಞೆಯಿಂದ ಸ್ವತಂತ್ರನಾದನೋ ಇಲ್ಲವೋ ಗೊತ್ತಿಲ್ಲ. ಅವನಿಗೆ ಸ್ವಾತಂತ್ರ್ಯ ನೀಡುತ್ತಲೆ ನಾ ಸ್ವತಂತ್ರಳಾದೆ. ನನ್ನೊಳಗಿನ ನಾನೇ ಗುರುತಿಸಿರದ ವ್ಯಕ್ತಿಯೊಂದು ನುಸುಳಿ ಹೊರ ಬಂದಿತ್ತು" (ಪುಟ 70)

ಈ ಸಂಕಲನದ ಎಲ್ಲ ಕತೆಗಳೂ ಇತ್ಯಾತ್ಮಕವಾಗಿ ಅಂತ್ಯವಾಗುತ್ತವೆ. 'ಭರವಸೆಯ ಕನಸುಗಳು', 'ಕಪ್ಪು ಮೋಡಕ್ಕೆ ಮೂಡುವ ಬೆಳ್ಳಿ ಅಂಚು', 'ಕಾಣದ ನಾಳೆಗಳಲ್ಲಿ', 'ಹಿಗ್ಗುತ್ತಾ ನೆಲಕ್ಕಿಳಿಯುವ ಕೆಂಪು ಸೂರ್ಯ', 'ಬೇರೆಯಾದ ಭವಿಷ್ಯದ' ಪ್ರತೀಕಗಳಲ್ಲಿ ಕತೆಯ ಪಾತ್ರಗಳು, ಹೊಸ ಮೌಲ್ಯಗಳ ಸಮಾಜ ಸೃಷ್ಟಿಯನ್ನು ಧ್ವನಿಸುತ್ತವೆ. ಆದರೆ ಈ ಬಗೆಯ ಅಂತ್ಯಗಳು ಇದಕ್ಕೆ ಪೂರಕವಾಗಿ ಬರುವ ಘಟನಾವಳಿಗಳು 'ಸೂತ್ರಬದ್ಧತೆ'ಗೆ ಸಿಲುಕುವ ಅಪಾಯದಿಂದ ಜೀವನಾನುಭವದ ಶೋಧನೆ ಪೇಲವವಾಗಿ ಬಿಡುವ ಅಪಾಯವೂ ಇಲ್ಲದಿಲ್ಲ.

ನೇಮಿಚಂದ್ರ ಅವರ ಬಹುತೇಕ ಕಥಾನಾಯಕಿಯರು ವೃತ್ತಿಪರರು. ಬದುಕಿನಲ್ಲಿ ಏನನ್ನಾದರೂ ಸಾಧಿಸುವ ಮಹತ್ವಾಕಾಂಕ್ಷೆ ಉಳ್ಳ ಛಲಗಾತಿಯರು. ಪಿತೃ ಪ್ರಧಾನ ಮೌಲ್ಯಗಳಲ್ಲಿ ಬೆಳೆಯುವ ನೋವು, ಹೆಣ್ತನದ "ಅಪಮಾನ"ಗಳು ಗಂಡು ಹೆಣ್ಣಿನ ಸಂಬಂಧದ ಸಂಕೀರ್ಣತೆಗಳು, ಸಮಾಜದ ಪ್ರಧಾನ ಮೌಲ್ಯಗಳಿಗೆ ಒಗ್ಗಿಹೋದ ಮನಸ್ಸು, ಅದನ್ನು ಬಿಡಿಸಿಕೊಂಡು ಹೊರಬರಲು ನಡೆಸುವ ಹೋರಾಟ–ಹೀಗೆ ಹಲವಾರು ಆಯಾಮಗಳಲ್ಲಿ ಹೆಣ್ಣಿನ ಮನಸ್ಸಿನ ಪದರಗಳನ್ನು ಸೂಕ್ಷ್ಮವಾಗಿ ಬಿಡಿಸುವ ಪ್ರಯತ್ನ ಮಾಡಲಾಗಿದೆ.

"ಕಡೆಗೆ ಅವೆಲ್ಲ ಅಮ್ಮ-ಅಪ್ಪ, ಸಮಾಜ ಹಾಕಿದ ನಿರ್ಬಂಧನೆಗಳೇ ಅಲ್ಲ. ನನಗೆ ನಾನೇ ಎಳೆದುಕೊಂಡ ಲಕ್ಷ್ಮಣರೇಖೆ ಎನಿಸಿತ್ತು. ಅವರೆಲ್ಲರ ನಿರೀಕ್ಷೆಗೆ ಹೊಂದಿನಿಂತು ಮಾದರಿಯಾಗುವ ಬಯಕೆ, ವಿಚಿತ್ರ ರುಣಿಕೆಯಾಗಿತ್ತು." (ಮತ್ತೆ ಬರೆದ ಕಥೆಗಳು ಪುಟ 26)

"'ಗಂಡನ ಇಚ್ಛೆಯನ್ನರಿವ ಸತಿ'ಯಾದೆ. ಗಂಡನ ಅಭಿಪ್ರಾಯಕ್ಕೆ ಸಪೂರಕವಾಗಿ ನನ್ನ ನಡವಳಿಕೆಯ ತಿದ್ದಿಕೊಂಡೆ. ನಿಜ, ಇದನ್ನು ಪೂರಾ ಅವ ಹೇರಿದ್ದಲ್ಲ. ನಾ ಸ್ಥಾಪಿಸದೆ ಬಿಟ್ಟಿದ್ದ ನನ್ನ ವ್ಯಕ್ತಿತ್ವವನ್ನು. ವಾದಿಸುವ ಹೋರಾಡುವ ಆ ಶ್ರಮವೇಕೆ ಎಂಬ ಆಲಸ್ಯದಲ್ಲಿ" (ಕಪ್ಪು ಮೋಡ, ಬೆಳ್ಳಿ ಅಂಚು ಪುಟ 53)

"ಇದನ್ನು ಪ್ರೀತಿ ಎಂದು ಅರ್ಥೈಸಬೇಡ ಅಂತ ನಾ ಹೇಳಿದ್ದೆ. ಅವಲಂಬನೆಯ ಮೂಲಭೂತ ಬೇಡಿಕೆಗೆ ಪ್ರೀತಿ-ಪ್ರೇಮದ ಎಷ್ಟೊಂದು ರಂಗಿನ ಪದಗಳ ಹೊದಿಸಿದರೂ, ಅದರ ಹರಕು ಕಣ್ಣಿಗೆ ರಾಚುತ್ತೆ" (ಅದೇ ಪುಟ 55)

"... ರವಿ ಮತ್ತೆ ಬರಬಹುದೆಂದು ನನ್ನ ನಿಷ್ಕ್ರಿಯತೆ ಕಂಡುಕೊಂಡ ಆಶಾವಾದ ಅದು" (ಅದೇ ಪುಟ 63). ಈ ಬಗೆಯ ಅಂತರಂಗ ಶೋಧನೆಯಲ್ಲಿ ಪ್ರಾಮಾಣಿಕತೆ ಕಂಡು ಬಂದರೂ ಕತೆಯಲ್ಲಿ ಬೆಳವಣಿಗೆ ಸಾಧಿಸುವ ಈ ಪಾತ್ರ ಗಳು ಸಹಜವಾಗಿ ಅರಳುವುದಿಲ್ಲ."

'ಹೊಸಹುಟ್ಟು' ಕತೆಯಲ್ಲಿ ನಮ್ಮ ಸಮಾಜದಲ್ಲಿ ಬಹಳಷ್ಟು ವೈಭವೀಕರಣಗೊಂಡಿರುವ 'ತಾಯ್ತನ'ವನ್ನು ಹೊಸ ದೃಷ್ಟಿಯಿಂದ ನೋಡುವ ಪ್ರಯತ್ನವಿದೆ.

"ಚಿತ್ರ ಬಿಡಿಸೋದು, ಕತೆ ಬರೆಯೋದು, ಯಾವುದೇ ಸೃಜನಶೀಲ ಕಾರ್ಯ ಹೆರುವ ಹೋರುವ ಕ್ರಿಯೆ ಯಂತೆಯೇ. ಹಾಗೆ ನೋಡಿದರೆ ನನ್ನ ಪ್ರೆಗ್ನೆನ್ಸಿಯಲ್ಲಿ ಸೃಜನಾತ್ಮಕ ಅದ್ಭುತವೇನೂ ಅನುಭವವಾಗಲಿಲ್ಲ. ಚೆನ್ನಾಗಿ ತಿನ್ನುವುದು ಬಿಟ್ಟರೆ ನಾ ಮಾಡುವುದೇನಿತ್ತು? ಒಂದು ಮಗುವನ್ನು ಬೆಳೆಸಿ ದೊಡ್ಡದು ಮಾಡುವುದು ಮಹತ್ವದ ಕೆಲಸ ಒಪ್ಪುತ್ತೇನೆ. ಆದರೆ ನಮ್ಮಲ್ಲಿ ಹೆರು ವುದಕ್ಕೆ ಕೊಡುವ ಪ್ರಾಮುಖ್ಯತೆಯೇ ಹೆಚ್ಚು. ಅವನ್ನು ಹೇಗೆ ಬೆಳೆಸುತ್ತೀ, ಕೇಳುವವರಾರು?"....

"ಶಶಿ, ಮುಕ್ಕಾಲು ಪಾಲು ಸ್ತ್ರೀಯರು ಬದುಕಿನಲ್ಲಿ ಯಾವ ಕ್ರಿಯಾಶೀಲ ಕೆಲಸಕ್ಕೂ ಕೈ ಹಾಕಿದವರಲ್ಲ ಮನೆ-ಗಂಡ-ಕಸಮುಸುರೆ ಈ ಬಗೆಯ ಬದಲಿಲ್ಲದ ಬದುಕಿನ ಬೇಸರದಲ್ಲಿ ಮಕ್ಕಳು ಅದ್ಭುತ ಸೃಷ್ಟಿಯಾಗಿ ಕಾಣುತ್ತವೆ. ಆದರೆ ನನಗೂ-ನಿನಗೂ ಈ ಕಾರಣಗಳಿಗೆ ಮಕ್ಕಳು ಬೇಕಿಲ್ಲ ಬಿಡು" (ಹೊಸ ಹುಟ್ಟು-ಪುಟ-115)

'ಏನೊಂದು ಆಗದವರು', ಬದಲಾಗುತ್ತಿರುವ ಸಮಾಜದ ವೃತ್ತಿಪರವಾದ ಸೂಕ್ಷ್ಮ ಮನಸ್ಸಿನ ಹೆಣ್ಣು ಸಂಗಾತಿಯ ಆಯ್ಕೆಯ ವಿಚಾರದಲ್ಲಿ ಅನುಭವಿಸುವ ಮಾನಸಿಕ ತುಮುಲ, ನಂತರ ಕೈಗೊಳ್ಳುವ ಸ್ಪಷ್ಟ ಸ್ವತಂತ್ರ ನಿರ್ಧಾರದ ನಿರೂಪಣೆ ಇದೆ.

"ನೀವು ಕಾಣದ ನಾಳೆಗಳಲ್ಲಿ" ಬದಲಾಗುತ್ತಿರುವ ಮೌಲ್ಯಗಳು ಹಾಗೂ ಹಿರಿಯ ತಲೆಮಾರಿನ ಮಧ್ಯದ ಸಂಘರ್ಷದಿಂದ ಅಸಹನೀಯವಾಗುವ ಬದುಕಿನ ಚಿತ್ರ ವಿದ್ದರೂ, "ಸೋತದ್ದು ನಾನು-ಶಶಿ ಮಾತ್ರ, ವ್ಯಕ್ತಿ ವ್ಯಕ್ತಿಯ ಸಂಬಂಧ ಸೋತದ್ದು, ಪ್ರೇಮ ವಿವಾಹವೆಂಬ ವಿಚಾರವಲ್ಲ, ನಾ ಮತ್ತೊಮ್ಮೆ ಶಶಿಯನ್ನೇ ಸೇರಿದರೆ ಅಚ್ಚರಿ ಪಡಬೇಡ" (ಪುಟ 103) ಎಂಬ ಹೇಳಿಕೆಯ ಮೂಲಕ, ಬದುಕು ಮತ್ತೆ ಸರಿಹೋಗಬಹುದೆಂಬ ಸಾಧ್ಯತೆಯ ಧ್ವನಿಯೊಂದಿಗೇ ಅಂತ್ಯವಾಗುತ್ತದೆ.

'ಸಾವಿನತ್ತ ಒಂದು ಹೆಜ್ಜೆ' ಆತ್ಮಹತ್ಯೆ –ಸಾವು ವಿಶ್ಲೇಷಿಸುವ ಕಥೆ. ಈ ಸಂಕಲನಕ್ಕೇ ಅಪ್ಪಾಗಿ ಹೊಂದಿ ಕೊಳ್ಳದ, ಹೆಚ್ಚಿನ ಅನುಭವವನ್ನೇನೂ ನೀಡದ ಕಥೆ.

ಸ್ತ್ರೀವಾದಿ ಸಂವೇದನೆಯ ನೆಲೆಯ ಹೊಸ ಅನುಭವ ನೀಡುವ ನೇಮಿಚಂದ್ರ ಅವರ ಕತೆಗಳು ಒಟ್ಟಾರೆ ನಿರೂಪಣಾ ಶೈಲಿ ಹಾಗೂ ಆಕರ್ಷಕ ಭಾಷೆಯಿಂದ ಮನ ಸೆಳೆಯುತ್ತದೆ. ಆದರೆ ಜೀವನಾನುಭವಗಳ ವೈವಿಧ್ಯತೆಯ ಗಾಢತೆ ಕಾಣದಂತಹ ಮಿತಿಯೂ ಈ ಕತೆಗಳಲ್ಲಿದೆ.

**ಸಿ.ಜಿ.ಎಂ.**

---

## ಓದಿರಿ !

## *Women Writing in India 600 B.C. to the Present*

Volume I : 600 B.C. to the early 20th Century
Edited by : Susie Tharu and K. Lalita
Publisher : Oxford University Press
Rs. : 135

# ನನ್ನ ಬದುಕು ನಿಂತಿದ್ದು-ತುಂಬಿಸಿಟ್ಟ ಬಂದೂಕಿನ ತರಹ

● ಎಮಿಲಿ ಡಿಕಿನ್‌ಸನ್

ಎಮಿಲಿ ಡಿಕಿನ್‌ಸನ್‌ಗೆ ತಾನೋರ್ವ ಪ್ರತ್ಯೇಕ ಹೆಣ್ಣು, ಎಲ್ಲರಿಗಿಂತ ತಾನು ಭಿನ್ನ ಎಂದು ತಿಳಿದಿದ್ದರಿಂದಲೋ ಏನೋ ಈಕೆ ಸಾವಿನತನಕ ಒಂಟಿಯಾಗಿ ಬದುಕಿದ್ದು ಆ್ಯಮ್‌ಹರ್ಸ್ಟ್‌ನ ಮೂಲೆಯ ಕೋಣೆಯೊಂದರಲ್ಲಿ. ಅಲ್ಲಿನ ಒಂದು ಪುಟ್ಟ ಮೇಜು, ಕುರ್ಚಿಯ ಮೇಲೆ ಕುಳಿತು ಈಕೆ ಬರೆದದ್ದು ಸಾವಿರಾರು ಪದ್ಯಗಳನ್ನು. ಆತ್ಮಹತ್ಯೆ, ಅಮರತ್ವ, ದೈಹಿಕ ಭಾವನೆಗಳು, ಕಾಡು ಪ್ರಾಣಿ, ಅತ್ಯಾಚಾರ, ಅಧಿಕಾರ, ಹುಚ್ಚು, ಸಾವು, ಪ್ರತ್ಯೇಕತೆ, ರಾಕ್ಷಸತನ, ಸೃಜನಶೀಲತೆ, ಕಲೆಗಾರಿಕೆ ಇಂತಹ ಹಲವಾರು ಮಾನಸಿಕ ತುಮುಲಗಳನ್ನು ಈಕೆ ಲೇಖನಿಯಿಂದ ಸಂಪ್ರದಾಯಬದ್ಧವಲ್ಲದ ಭಾಷೆಯಲ್ಲಿ ಪದ್ಯದ ರೂಪದಲ್ಲಿ ಮೂಡಿಸಿದ್ದು ಈ ಕೋಣೆಯಲ್ಲಿ ಕುಳಿತುಕೊಂಡು. ಪ್ರತ್ಯೇಕವಾಗಿ ವಾಸಿಸುತ್ತಿದ್ದರೂ ಎಮಿಲಿ ಡಿಕಿನ್‌ಸನ್‌ಗೆ ಆಕೆಯದೇ ಆದ ಒಂದು ಬಳಗ ಇರಲಿಲ್ಲವೆಂದಲ್ಲ. ಆಕೆ ಬಹಳಷ್ಟು ಆಕರ್ಷಿತಗೊಂಡಿದ್ದು ಬೌದ್ಧಿಕ ವಲಯದ ಗಂಡು ಹಾಗೂ ಹೆಣ್ಣು ವ್ಯಕ್ತಿತ್ವಗಳಿಂದ. ಜಾರ್ಜ ಎಲಿಯೆಟ್, ಎಲಿಜಬೆತ್ ಬ್ಯಾರೆಟ್, ಎಮಿಲಿ ಬ್ರಾಂಟೆಯಂತಹವರ ಇರುವಿಕೆಯೇ ಆಕೆಗೆ ದೊಡ್ಡ ಸ್ಫೂರ್ತಿಯಾಗಿತ್ತು. ತಾನು ಆರಿಸಿಕೊಂಡ ಈ ಮೂಲೆಯ ಕೋಣೆ ತೋರಿಸಿ, 'ಇಲ್ಲಿದೆ ನನ್ನ ಸ್ವಾತಂತ್ರ್ಯ' ಎಂದು ಎಮಿಲಿ ತನ್ನ ಸಂಬಂಧಿಕಳಾದ ಮಾರ್ಥಾಳಲ್ಲಿ ನುಡಿದಿದ್ದಳು. ಈ ಕೋಣೆಯಲ್ಲಿ ಕುಳಿತುಕೊಂಡ ಈ ಪ್ರತಿಭಾವಂತ ಹೆಂಗಸು ಪದ್ಯದಲ್ಲಿ ಹಲವಾರು ಹೊಳವುಗಳುಳ್ಳ ಭಾಷೆಯ ಸಾಂದ್ರತೆಯನ್ನು ಸಂಕೀರ್ಣತೆ ಒಳಗೊಂಡ ಆಕೃತಿಯನ್ನು, ಪ್ರತಿಮೆಗಳನ್ನು ಚಿತ್ರಿಸಿ ತನ್ನ ವ್ಯಕ್ತಿತ್ವದ ಒಳಗುಗಳನ್ನು ಪದ್ಯ ರೂಪದಲ್ಲಿ ಹೊರಗೆಡುವಲು ಪ್ರಯತ್ನಿಸಿದ್ದಳು.

'ಅವನು'–ಎಂಬ ಅನ್ವರ್ಥ ನಾಮ ಪದ ಎಮಿಲಿ

---

ಎಮಿಲಿ ಡಿಕಿನ್‌ಸನ್ 19ನೇ ಶತಮಾನದ ಮಧ್ಯಭಾಗದ ಅಮೇರಿಕಾದ ಪ್ರತಿಭಾವಂತ ಕವಯಿತ್ರಿ. ಈಕೆ ಜೀವಂತವಾಗಿದ್ದಾಗ ಈಕೆಯ ಏಳು ಕವನ ಸಂಕಲನಗಳು ಪ್ರಕಟಗೊಂಡಿದ್ದವು. ಸಾವಿನ ನಂತರ ಈಕೆಯ ಸಾವಿರಾರು ಪದ್ಯಗಳು ಈಕೆಯ ಕೋಣೆಯಲ್ಲಿ ಸಿಕ್ಕವು. ಈಕೆಯ ಪದ್ಯಗಳಲ್ಲಿ ಬರುವ 'ಅವನು'-ಎಂಬ ಅನ್ವರ್ಥ ನಾಮ ಪದಕ್ಕೆ ಹಲವಾರು ರೀತಿಯ ವ್ಯಾಖ್ಯಾನಗಳನ್ನು ವಿಮರ್ಶಕರು ಮಾಡಿರುತ್ತಾರೆ. ದೇವರ ಹಾಗೂ ಆಕೆಯ ಸಂಬಂಧ ; ಸೃಜನಶೀಲತೆಯ ಜೊತೆಗೆ ಆಕೆಗಿದ್ದ ನಿಗೂಢ ಶಕ್ತಿ ; ಸಾವು ಹಾಗೂ ಆ ಬಗ್ಗೆ ಆಕೆಯ ನಿಲುವು ; ಪುರುಷರ ಶಕ್ತಿ–ಇಂತಹ ಅನೇಕ ಆಯಾಮಗಳನ್ನು 'ಅವನು' ಎಂಬ ಅನ್ವರ್ಥ ನಾಮದಲ್ಲಿ ಹುಡುಕಲಾಗಿದೆ. ಪ್ರತ್ಯೇಕ ಕೋಣೆಯೊಂದರಲ್ಲಿ ಕುಳಿತು ಎರಡು ಸಾವಿರ ಪದ್ಯ ಬರೆದ ಈ ಕವಯಿತ್ರಿ ಅವಿವಾಹಿತೆಯಾಗಿಯೇ ಉಳಿದಿದ್ದಳು. ತನ್ನ ಬದುಕಿನ ಸ್ವಾತಂತ್ರ್ಯವನ್ನು ಈ ಪ್ರತ್ಯೇಕ ಕೋಣೆಯಲ್ಲಿ ಕುಳಿತು ಬರೆಯುವ ಪ್ರಕ್ರಿಯೆಯಲ್ಲಿ ಕಂಡುಕೊಂಡ ಈ ಕವಯಿತ್ರಿ 'ಹೆಣ್ತನ'-ವನ್ನು ಹೇಗೆ ಕಂಡಿದ್ದಳು ಎಂಬುದು ಕುತೂಹಲಕಾರಿ. 'ಸ್ತ್ರೀತ್ವ' ದ ಬೆಲೆ ತೆತ್ತು ಈಕೆ ಪ್ರತಿಭಾವಂತ ಕವಯಿತ್ರಿಯಾಗುವುದು ಆಕೆ ಬದುಕಿದ ಸಮಾಜದಲ್ಲಿ ಅನಿವಾರ್ಯ ಆಯ್ಕೆ ಆಗಿತ್ತೆ ? ಈಕೆಯ 'ಸ್ತ್ರೀತ್ವ'ದ ಪ್ರಶ್ನೆಗಳನ್ನು ವಿವಾದಾತ್ಮಕವಾಗಿ ಎತ್ತಿ ಹಲವಾರು ವಿಮರ್ಶೆಗಳಲ್ಲಿ ಹಲವಾರು ವ್ಯಾಖ್ಯಾನಗಳಿಗೆ, ಆಯಾಮಗಳಿಗೆ ಎಡೆಮಾಡಿಕೊಟ್ಟ ಈಕೆಯ ಅತೀ ಮುಖ್ಯ ಪದ್ಯ 'ನನ್ನ ಬದುಕು ನಿಂತಿದ್ದು-ತುಂಬಿಸಿಟ್ಟ ಬಂದೂಕಿನ ತರಹ.'. ಈ ಪದ್ಯ ವ್ಯಕ್ತಿಯೊಳಗಡಕವಾಗಿರುವ ಹೆಣ್ತನ-ಗಂಡುತನಗಳ ಬಗ್ಗೆಗಷ್ಟೇ ಅಲ್ಲದೇ ಎಮಿಲಿ ಡಿಕಿನ್‌ಸನ್ ಆಕೆ ಬದುಕಿದ ಸಂದರ್ಭದ ಸಮಾಜದ ಮೌಲ್ಯಗಳಲ್ಲಿ ತನ್ನ ಹೆಣ್ತನ ಹೇಗೆ ಕಂಡಿದ್ದಳು ಎಂಬುದರ ಮೇಲೆ ಅಗಾಧ ಬೆಳಕು ಚೆಲ್ಲುತ್ತದೆ. ಈ ಕವನವನ್ನು ಕೇಂದ್ರಬಿಂದುವಾಗಿಟ್ಟುಕೊಂಡು ಇತ್ತೀಚಿನ ಪ್ರಸಿದ್ಧ ಕವಯಿತ್ರಿ ಆ್ಯಡ್ರಿಯನ್ ರಿಚ್ ಹಾಗೂ ವಿಮರ್ಶಕಿ ಆಲ್‌ಬರ್ಟ್ ಗೆಲ್ಪಿ ಇವರು ಎಮಿಲಿ ಡಿಕನ್‌ಸನ್ ಬಗ್ಗೆ ಬರೆದ ಎರಡು ಲೇಖನಗಳನ್ನು ಆಧರಿಸಿ ಈ ಲೇಖನ ಸಿದ್ಧಪಡಿಸಲಾಗಿದೆ.

---

ಡಿಕಿನ್‌ಸನ್‌ಳ ಹಲವಾರು ಕವನಗಳಲ್ಲಿ ಬರುತ್ತದೆ. ಈ 'ಅವನು'-ಎಂದು ಬರುವ ಅನ್ವರ್ಥ ನಾಮ ಪದ ರಕ್ತ ಮಾಂಸವಿರುವ ಡಿಕಿನ್‌ಸನ್‌ಳ ಪ್ರಿಯತಮ ಇರಬಹು ದೆಂದು ಡಿಕಿನ್‌ಸನ್‌ಳ ಅನೇಕ ವಿಮರ್ಶಕರು ತಲೆ ಕೆಡಿಸಿ ಕೊಂಡು ಬರೆದುದುಂಟು. ಡಿಕಿನ್‌ಸನ್ ಆತನನ್ನು ತ್ಯಜಿಸಿರು ವುದೇ ಅಥವಾ ಆತ ಆಕೆಯನ್ನು ತ್ಯಜಿಸಿರುವುದೇ ಆಕೆಯ ಪ್ರತ್ಯೇಕ ವಾಸಕ್ಕೆ ಹಾಗೂ ಅವಳ ಪದ್ಯಗಳಲ್ಲಿ ತುಡಿಯುವ ಭಾವನೆಗಳಿಗೆ ಕಾರಣ ಎಂದೂ ಕೂಡಾ ಬರೆಯಲಾಗಿದೆ. ಡಿಕಿನ್‌ಸನ್ ಬೆಳೆದುದು ಜೂಡಿಯೋ ಕ್ರಿಶ್ಚಿಯನ್ ಹಾಗೂ ಕ್ವಾಸಿ-ಪ್ಯೂರಿಟಾನ್ ಸಂಸ್ಕೃತಿಯಲ್ಲಿ. ಧಾರ್ಮಿಕ ಭಾವನೆಗಳು ತಮ್ಮ ಔನ್ನತ್ಯದ ಹಂತದಲ್ಲಿ ಇರುವ ಸಂದರ್ಭ. ಸಾಹಿತ್ಯದ ಪ್ರಕಾರಗಳಲ್ಲಿ ದೈವತ್ವ ವನ್ನು ಹೆಚ್ಚು-ಕಡಿಮೆ ಪುರುಷಾಕಾರದೊಂದಿಗೆ ಸಮ್ಮಿಳನ ಗೊಳಿಸಿದ ಸಂದರ್ಭದಲ್ಲಿ ಡಿಕಿನ್‌ಸನ್ ಕೂಡ ಲೈಂಗಿಕ ಸಂವೇದನೆಗಳನ್ನು ಧಾರ್ಮಿಕ ಅನುಭವವಾಗಿ ಹಾಗೂ ಸಂಕೇತಗಳನ್ನಾಗಿ ಬಳಸಿ ಆ ನಿಗೂಢಗಳನ್ನು ಭೇದಿಸಲು ಪ್ರಯತ್ನಿಸಿದುದು ಕಂಡುಬರುತ್ತದೆ.

ಡಿಕಿನ್‌ಸನ್ ತನ್ನ ವ್ಯಕ್ತಿತ್ವದ ಒಳಗಿನ ಸೃಜನಶೀಲ ಶಕ್ತಿ ಯೊಂದಿಗೆ ತಾನು ಹೊಂದಿದ ಸಂಬಂಧವನ್ನು ತನ್ನ ಬಹುತೇಕ ಪದ್ಯಗಳಲ್ಲಿ ಪುರುಷನ ರೂಪದಲ್ಲಿ ಸಾಂಕೇತಿಕ ವಾಗಿ ಚಿತ್ರಿಸುತ್ತಾಳೆ. ಗಂಡಸರು ತಮ್ಮೊಳಗಿನ ಹೆಣ್ತನ ವನ್ನು ಆಹ್ವಾನಿಸಿದ ಹಾಗೆ ಡಿಕಿನ್‌ಸನ್ ಸಹಾ ಇಲ್ಲಿ ತನ್ನೊಳಗಿನ ಚೇತನವನ್ನು ಪುರುಷ ರೂಪದಲ್ಲಿ ಆಹ್ವಾನಿಸುತ್ತಾಳೆ. ಡಿಕಿನ್‌ಸನ್‌ಳ ಹಾಗೆ ಸಂಪ್ರದಾಯ ಬದ್ಧವಲ್ಲದ ಹಾಗೂ ನಿಜವಾದ ಅನ್ನಿಸಿಕೆಯ ಪದ್ಯ ಬರೆಯುವ ಹೆಂಗಸರು ತಮ್ಮ ಹೆಂಗಸಿನ ಸ್ಥಾನಮಾನ ಕಳೆದುಕೊಳ್ಳುವ ಹೆದರಿಕೆ ಹೊಂದಿರುತ್ತಾರೆ. ಹೆಂಗಸರ ಸ್ಥಾನ, ಗಂಡಸಿನ ಜೊತೆಗಿನ ಸಂಬಂಧದಲ್ಲಿ ಎಂದರೆ ಮಗಳು, ತಾಯಿ, ತಂಗಿ, ಹೆಂಡತಿ, ಸೂಳೆ-ಇಂತಹ ರೀತಿಯಲ್ಲಿ ಗುರುತಿಸಲ್ಪಡುತ್ತದೆ. ಪಿತೃ ಪ್ರಧಾನ ಸಂಸ್ಕೃತಿಯಲ್ಲಿ 'ಶಕ್ತಿ', 'ಅಧಿಕಾರ'ದ ವ್ಯಕ್ತಿತ್ವಗಳು ಪುರುಷರೇ ಆದ್ದರಿಂದ ಡಿಕಿನ್‌ಸನ್ ಕೂಡಾ ತನ್ನ ಆಂತರಿಕ ಚೇತನ, ಶಕ್ತಿಗೆ ಗಂಡಸಿನ ಲಿಂಗಾಧಾರಣೆ ಮಾಡುವುದು ಸಹಜ ಎಂದು ಭಾವಿಸಿದ್ದಳು. ಅಂದರೆ ಸಂಪ್ರದಾಯಬದ್ಧ ಹೆಂಗಸಿನ ಚೌಕಟ್ಟಿನೊಳಗೆ ತಾನು ಹೊಂದಿಕೊಳ್ಳಲಾರೆ ಎಂದು ಆಕೆಗೆ ಅನ್ನಿಸಿರುವುದು ಆಕೆಯ ಪದ್ಯಗಳಲ್ಲಿ ಸ್ಪಷ್ಟವಾಗುತ್ತದೆ. ತನ್ನೊಳಗಿನ ಆಂತರಿಕ ಚೇತನದ ಶಕ್ತಿಗಳನ್ನು ಗುರುತಿಸುವ ಜೊತೆಗೆ ಅದನ್ನು ಒಪ್ಪಿಕೊಳ್ಳುವ ದಾರಿ ಯಾವಾಗಲೂ ಹೆಂಗಸಿಗೆ ಅಪಾಯ ಗಳಿಂದ, ಕಷ್ಟಗಳಿಂದ ಕೂಡಿದ್ದು. ಇದಕ್ಕಾಗಿ ಡಿಕಿನ್‌ಸನ್ ಮಾಡಿದ ಧೃಡ ನಿರ್ಧಾರವೆಂದರೆ ಪ್ರತ್ಯೇಕವಾಗಿ, ಒಂಟಿಯಾಗಿ ಬದುಕುವುದು, ಕೋಣೆಯೊಂದರಲ್ಲಿ ಕುಳಿತು ಮನಸ್ಸಿನ ಪ್ರಪಂಚಕ್ಕೇ ತನ್ನನ್ನು ಅರ್ಪಿಸಿಕೊಂಡು, ಆ ಮಾನಸಿಕ ಸತ್ಯಗಳನ್ನು ಪದ್ಯಗಳಲ್ಲಿ ಹಿಡಿದಿಡುವುದು. ಬದುಕಿನುದ್ದಕ್ಕೂ ಈಕೆಯ ಮನಸ್ಸು ಕೇಂದ್ರೀಕೃತ ವಾದದ್ದು ಭಾಷೆಯ ಸಾಧ್ಯತೆಗಳ ಬಗ್ಗೆ, ಅಸ್ತಿತ್ವದ ಬಗ್ಗೆ, ಪ್ರತ್ಯೇಕತೆಯ ಬಗ್ಗೆ, ಸಂಬಂಧಗಳ ಬಗ್ಗೆ, ಆತ್ಮದ ಒಗ್ಗೂಡುವಿಕೆಯ ಬಗ್ಗೆ. ಮಾನಸಿಕ ದ್ವಂದ್ವ ಗಳನ್ನು, ಸ್ಥಿತಿ-ಗತಿಗಳನ್ನು ಶೇಕ್ಸ್‌ಪಿಯರ್ ಹೊರತಾಗಿ ಅಷ್ಟು ಸಮರ್ಥಳಾಗಿ ಹಿಡಿದಿಟ್ಟವಳೆಂದರೆ ಡಿಕಿನ್‌ಸನ್. ಆದರೆ ಡಿಕಿನ್‌ಸನ್‌ಳ ಬದುಕು ಅಷ್ಟು ಸುಲಲಿತವಾಗಿರ ಲಿಲ್ಲ. ಆಗಿನ ಪರಿಸ್ಥಿತಿ ಹೇಗಿತ್ತು ಅಂದರೆ ಯಾವ ಹೆಂಗಸು ಡಿಕಿನ್‌ಸನ್ ತರಹ ಹುಡುಕಾಟ ನಡೆಸಿ ತನ್ನ ವ್ಯಕ್ತಿತ್ವದ ಒಳಗಿನ ತುಮುಲಗಳಿಗೆ, ಸಂವೇದನೆಗಳಿಗೆ ಪ್ರಾಮುಖ್ಯತೆ ನೀಡುತ್ತಾಳೋ ಅಂತಹವಳು ಬದುಕನ್ನೇ ತ್ಯಜಿಸಬೇಕಾದ ಅಗತ್ಯತೆ ಇತ್ತು. ಬದುಕಿನಲ್ಲಿ ಎಲ್ಲವನ್ನೂ ತ್ಯಜಿಸಿ, ಕೋಣೆಯೊಂದರಲ್ಲಿ ಸ್ವಾತಂತ್ರ್ಯ ಕಂಡುಕೊಳ್ಳ ಬಯಸಿದ ಡಿಕಿನ್‌ಸನ್‌ಳ ಬಗ್ಗೆ ಸಾಕಷ್ಟು ವಾದ-ವಿವಾದ ಗಳು ಹುಟ್ಟಿಕೊಂಡಿದ್ದವು. ಆದರೆ ಆಕೆಯ ಎಲ್ಲಾ ಪದ್ಯಗಳ ಸಂಕಲನದ ಸಮಗ್ರಕಾವ್ಯ ಪ್ರಕಟವಾದಾಗ ಆ ತರಹೆಯ ಗೊಂದಲಗಳು ಕಡಿಮೆಯಾಗಿ ಆಕೆಯ ಪ್ರಶ್ನಾತೀತ ಸೃಜನಾತ್ಮಕ ಶಕ್ತಿ, ಚೇತನ, ಆಕೆಯ ಬೌದ್ಧಿಕತೆ, ಸೂಕ್ಷ್ಮ ಮನಸ್ಸು ಇಂತಹವುಗಳು ಹೆಚ್ಚು ಮಹತ್ವ ಪಡೆದವು. ಇವೆಲ್ಲದರ ನಡುವೆಯೂ ಡಿಕಿನ್‌ಸನ್‌ಳ ಬದುಕು ಸುಲಭ-ಸರಳಿತವಾಗಿರಲಿಲ್ಲ.

1861ರಿಂದ 1862ರವರೆಗಿನ ಕಾಲ ಆಕೆಯ ಕಾವ್ಯ

ಥಾಮಸ್ ವೆಂಟ್ ವರ್ಥ ಹಿಗ್ಗಿನ್ಸ್ ಸನ್ ವಿಮರ್ಶಕ ನೊಡನೆ ಎಮಿಲಿ ಹೇಳಿದುದು ಹೀಗೆ: "ದೈಹಿಕವಾಗಿ ಒಂದು ಪಕ್ಷ ನನ್ನಿಂದ ನನ್ನ ತಲೆ ಬೇರ್ಪಡಿಸಲಾಗಿದೆ ಎಂದು ನನಗೆ ಅನ್ನಿಸಿದರೆ, ನನಗೆ ಗೊತ್ತು, ಅದೇ ಕಾವ್ಯವಾಗು ತ್ತದೆ....ಮತ್ತೇನಾದರೂ ದಾರಿಯಿದೆಯೇ ?"

ಎಮಿಲಿ ಡಿಕಿನಸನ್‌ಗೆ ಅವಳೊಳಗೆ ಹಾಗೂ ಅವಳ ಬಗ್ಗೆ ಅವಳಿಗಿದ್ದ ದ್ವಂದ್ವ ಆಕೆಯ ಪದ್ಯವೊಂದರ ಈ ಕೆಳಗಿನ ಸಾಲುಗಳಲ್ಲಿ ನೋಡಬಹುದು.

'ಪತ್ನಿ' ಯ ಪ್ರೀತಿಯನ್ನು ಮರುಸಿದ್ಧ ತೆಗೊಳಿಸಿ
ಯಾವಾಗ ಅವರುನನ್ನ ಮೆದುಳನ್ನು ಸ್ಥಳೀಕರಿಸುತ್ತಾರೋ
ಆಗ
ನನ್ನ ಗುರುತಿನ ಎದೆ ಭಾಗ ಕತ್ತರಿಸಿ
ನನಗೆ ಗಂಡಸಿನ ತರಹೆ ಗಡ್ಡ ಬೆಳೆಸಿಬಿಡಿ

ಸಾಧನೆಯ ಮಹತ್ವದ ಯುಗ. 'ಆತ ನನ್ನ ಬದುಕಿನ ಸುತ್ತ ಬೆಲ್ಟ್ ತೊಡಿಸಿದ್ದ'-ಈ ಪದ್ಯ ಒಂದು ವಿಚಿತ್ರ ಶಕ್ತಿ ಆಕೆಯನ್ನು ಆವರಿಸಿದ ರೀತಿ ವ್ಯಾಖ್ಯಾನಿಸಿ ಓದ ಬಹುದು. ದೇವರು ಅಥವಾ ಮಾನವ ಪ್ರೇಮ ಆಕೆ ಯನ್ನು ಆವರಿಸಿದ ಹಾಗೆಯೂ ಓದಬಹುದು. ಆ ವಿಚಿತ್ರ ಶಕ್ತಿ ಆಕೆಯ ಸೃಜನಶೀಲತೆಯೊಡಗಿನ ಬಗ್ಗೆ ಯಾಗಿಯೂ ಕೂಡಾ ಈ ಪದ್ಯ ಓದಬಹುದು, ಟೇಡ್ ಹಪ್ಸ್ ಎಂಬ ವಿಮರ್ಶಕ ಹೇಳುತ್ತಾನೆ : ಈಕೆಯ ಕಾವ್ಯದ ಭಾವನೆಗಳು ಸಾರ್ವತ್ರಿಕ. ಆಕೆ ದೈವತ್ವದ ಕಲ್ಪನೆಯಲ್ಲಿ ಈ ಭಾವನೆಗಳನ್ನು ಇಟ್ಟು ನೋಡುತ್ತಾಳೆ. ಪ್ರಾಪಂಚಿಕ ಹಂತದಲ್ಲಿ ನಿರಾಕರಿಸಲ್ಪಟ್ಟ ಮದುವೆಯ ಸಂಬಂಧದ ಅರ್ಥವನ್ನು ಆಧ್ಯಾತ್ಮಿಕ ಹಂತದಲ್ಲಿ ಕಾಣ ಬಯಸುತ್ತಾಳೆ.

ಎಮಿಲಿ ಡಿಕಿನ್‌ಸನ್ ಮದುವೆಯಾಗದೇ ಉಳಿದುದು ಮಾನಸಿಕ ಅಸ್ವಸ್ಥತೆಯ ತ್ಯಜಿಸುವಿಕೆಯಾಗಿರಲಿಲ್ಲ. ಅದು ಆಕೆಯ ಪ್ರಜ್ಞಾಪಂತ ಆಯ್ಕೆಯೂ ಆಗಿರಲಿಲ್ಲ. ಆಕೆ ಚರ್ಚಿನ ಸಾಂಪ್ರದಾಯಿಕ ನೋಟದ ಧಾರ್ಮಿಕತೆಯಿಂದ ದೂರ ಇದ್ದವಳು. ಅಂತಹ ಧಾರ್ಮಿಕತೆಗೆ ಆಕೆ ಅಂಟಿ ಕೊಂಡಿಯೂ ಇರಲಿಲ್ಲ. ಮದುವೆಗಿಂತ ಮುಖ್ಯವಾದ, ಅತಿ ಮುಖ್ಯವಾದ ಒಂದು ಅಗತ್ಯ ಇತ್ತು ಆಕೆಗೆ. ಹಾಗಿದ್ದರೆ ಎಮಿಲಿಯ ಇಡಿಯ ಬದುಕನ್ನು ಆವರಿಸಿ ಕೊಂಡ ಅಗತ್ಯ ಯಾವುದು ? ಉತ್ತರ ಬಹಳ ಸ್ಪಷ್ಟ. ಕಾವ್ಯಕ್ಕೋಸ್ಕರ ಕಾವ್ಯದ ಭಾಷೆ, ಪ್ರತಿಮೆ, ಆಕಾರ ಆಶಯಕ್ಕೋಸ್ಕರ. ಎಮಿಲಿ ಬರೆದದ್ದು 2000 ಪದ್ಯ ಗಳನ್ನು. ಆಕೆ ತೀವ್ರವಾಗಿ ಬರೆಯುತ್ತಿದ್ದ ಕಾಲವೊಂದ ರಲ್ಲಿಯೇ 365 ಪದ್ಯಗಳನ್ನು ಆಕೆ ಬರೆದಿದ್ದಳು. ಕಾವ್ಯ ಆಕೆಗೆ ಕೊನೆಯುತನಕ ಜೀವನ ಉಸಿರಾಗಿತ್ತು.

ಎಮಿಲಿ ಹೆಂಗಸಿಗೆ ಒಂದು ಆಂತರಿಕ ಶಕ್ತಿ ಆವಾಹನೆ ಯಾದಾಗಿನ ಸ್ಥಿತಿ ಕುರಿತು ಹಲವಾರು ಪದ್ಯ ಬರೆ ದಿದ್ದಾಳೆ. ಸ್ತ್ರೀಯಲ್ಲಿ ಆಕೆಯ ಒಳಗಿನ, ಆಂತರಿಕ ಚೈತನ್ಯದ ಶಕ್ತಿ ಆವಾಹನೆಯಾದಾಗ ತಮ್ಮೊಳಗಿನ ತುಡಿತ ಗಳಿಗೆ ತುಡಿಯುವ ಹೆಂಗಸಿನ ದಾರಿಯಲ್ಲಿ ಕಷ್ಟ, ಅಪಾಯ ಗಳಿರುತ್ತವೆ. ಒಂದು ರೀತಿ ಈ ಶಕ್ತಿ ಆವಾಹನೆಯಾದಾಗ ಆ ಶಕ್ತಿಯ ಬಿಟ್ಟು ಬದುಕಲಾರದಂತಹ ಸ್ಥಿತಿ, ಸಂದರ್ಭ ಒದಗಿ ಬರುತ್ತದೆ. ಎಮಿಲಿಯಲ್ಲಿ ಇಂತಹ ಆಂತರಿಕ ಚೈತನ್ಯದ ಶಕ್ತಿ, ಸೃಜನ ಶೀಲತೆಯ ಶಕ್ತಿ ಸಾಕಾರ ರೂಪ ಪಡೆಯುವುದು ಪುರುಷನ ಚಿತ್ರದಲ್ಲಿ. ಈ ಚಿತ್ರದಲ್ಲಿ ತನ್ನನ್ನು ಗುರುತಿಸಿಕೊಳ್ಳುವ ಎಮಿಲಿ ತಾನು ಅಪಾಯ ಕಾರಿ ಆಯುಧ ಎಂದು ಭಾವಿಸುತ್ತಾಳೆ.

ಎಮಿಲಿಯ ಈ ಕೆಳಗಿನ ಪದ್ಯ ಅನೇಕ ವಿಮರ್ಶಕರಿಂದ ವಿಮರ್ಶೆಗೆ ಒಳಗಾದ ಪದ್ಯ. ಇದರಲ್ಲಿ ಬಿಡಿಸಲಾಗದ ಒಗಟು, ಮಾನಸಿಕ ದ್ವಂದ್ವಗಳನ್ನು ಅನೇಕ ವಿಮರ್ಶಕರು ಕಂಡಿದ್ದಾರೆ. ಈ ಪದ್ಯ ಬರೆಯಲ್ಪಟ್ಟದ್ದು 1863ರಲ್ಲಿ ಎಂದು ಊಹಿಸಲಾಗಿದೆ.

ನನ್ನ ಬದುಕು ನಿಂತಿದ್ದು-ತುಂಬಿಸಿಟ್ಟ ಬಂದೂಕಿನ ತರಹ
ಮೂಲೆಗಳಲ್ಲಿ-ಬೆಳಗಿನ ತನಕ
ಒಡೆಯ ಧಾವಿಸಿದ-ಗುರುತಿಸಿದ
ಮತ್ತು ನನ್ನನ್ನು ಹೊತ್ತು ನಡೆದ-

ಮತ್ತೆ ಈಗ ನಾವು ಪರಮಾಧಿಕಾರದ ಕಾಡುಗಳಲ್ಲಿ
ತಿರುಗಾಡುತ್ತೇವೆ.
ಮತ್ತೆ ಈಗ ಜಿಂಕೆಯನ್ನು ಬೇಟೆಯಾಡುತ್ತೇವೆ.
ಮತ್ತೆ ಪ್ರತಿ ಕ್ಷಣ ಅವನಿಗೋಸ್ಕರ ನಾನು
ಮಾತನಾಡುತ್ತೇನೆ.
ಬೆಟ್ಟಗುಡ್ಡಗಳು ನೇರವಾಗಿ ಪ್ರತಿಕ್ರಿಯಿಸುತ್ತವೆ.

ನಾನು ನಗುತ್ತೇನೆ, ಸುಂದರ ಬೆಳಕು
ಕಣಿವೆಗಳಲ್ಲಿ ಪ್ರಕಾಶಿಸುತ್ತದೆ.
ಅದು ವೇಸುವಿಯಸ್ ಮುಖದ ತರಹ
ತನ್ನ ಸಂತೋಷವ ಬೀರುತ್ತದೆ.

ಮತ್ತೆ ರಾತ್ರಿಯಾದಾಗ-ನಮ್ಮ ಒಳ್ಳೆಯ ದಿನವಾಗಿದೆ
ನಾನು ನನ್ನ ಒಡೆಯನ ತಲೆ ಕಾಯುತ್ತೇನೆ.
ಇದು ಐಡರ್-ಬಾತುಕೋಳಿಗಿಂತ ಉತ್ತಮವಾದ
ಆಳವಾದ ತಲೆದಿಂಬು-ಹಂಚಿಕೊಳ್ಳಲು.

ಅವನ ಶತ್ರು–ನನಗೆ ಪರಮ ಶತ್ರು
ಎರಡನೆಯ ಬಾರಿಯಲ್ಲಿ ಏನೂ ಅಲುಗಾಡಿಸುವುದಿಲ್ಲ.
ನಾನು ಯಾರ ಮೇಲೆ ಹಳದಿ ಕಣ್ಣು ಇಟ್ಟಿರುವೆನೋ–
ಅಥವಾ ವಿಶೇಷ ಹೆಬ್ಬೆರಳು–
ನಾನು ಅವನಿಗಿಂತ ಹೆಚ್ಚಾಗಿ ಬದುಕುವೆನಾದಾಗ್ಯೂ
ಅವನು ನನಗಿಂತ ಹೆಚ್ಚಾಗಿ ಬದುಕಬೇಕು
ನಾನು ಕೊಲ್ಲುವ ಶಕ್ತಿ ಹೊಂದಿರುವೆನೋ
ಸಾಯುವ ಶಕ್ತಿಯ ಹೊರತಾಗಿ.

ಇಲ್ಲಿ ಎಮಿಲಿ ತನ್ನ ವ್ಯಕ್ತಿತ್ವದೊಳಗಿನ ಇನ್ನೊಂದು ತನವನ್ನು ಪುರುಷ ಆಕಾರದಲ್ಲಿ ಕಾಣಬಯಸುತ್ತಾಳೆ. ಇಲ್ಲಿನ ಗಂಡು ಕ್ರಿಯಾಶೀಲ, ಇಚ್ಛಾನುಶಕ್ತಿಯುಳ್ಳವ. ತುಂಬಿಸಿಟ್ಟ ಬಂದೂಕಿನ ಬದುಕು ಕ್ರಿಯಾಹೀನವಾದದ್ದು. ಇದರ ಕ್ರಿಯಾಹೀನತೆ ಒಡೆಯ ಬಂದು ಅದನ್ನು ಪಡೆಯುವವರೆಗೆ. ಆ ಒಡೆಯ ಬಂದು ಅದನ್ನು ಪಡೆದು ಕೊಂಡಾಗ ಅದು ಬೆಟ್ಟಗುಡ್ಡಗಳಲ್ಲಿ, ಕಣಿವೆಗಳಲ್ಲಿ ಶಬ್ದ ಮಾಡುವ ತಾಕತ್ತು ಪಡೆದುಕೊಳ್ಳುತ್ತದೆ. ಒಡೆಯನ ಶತ್ರು ಈಕೆಗೂ ಶತ್ರು. ಆ ಬಂದೂಕು ಅವನಿಗಾಗಿ ಮಾತನಾಡು ತ್ತದೆ. ಈ ಪದ್ಯದಲ್ಲಿ ಹೆಣ್ತನದ ಪ್ರಜ್ಞೆ ಸಂಕೇತಗಳ ಒಳಗಡೆ ಹುದುಗಿದೆ.

ಕ್ರಿಯಾಶೀಲ ಇಚ್ಛೆ–ಹಾಗೂ ಸೃಷ್ಟಿಯ ಬಯಕೆ ಹೆಂಗಸಲ್ಲಿ ಇಲ್ಲಿ ಹಿಂಸೆಯ ಮುಖಗಳನ್ನು ಹುಟ್ಟು ಹಾಕುತ್ತದೆ. ಇಲ್ಲಿಯ ಹಿಂಸೆ ಸಾಯಿಸುವ ಹಾಗೂ ಸಾವಿನಿಂದ ಶಿಕ್ಷೆಗೊಳಗಾಗುವುದು. ಬಂದೂಕು ಒಡೆಯ ತನ್ನನ್ನು ಆವರಿಸಿಕೊಂಡ ಮೇಲೆ ಸೃಷ್ಟಿಕಾರ್ಯದಲ್ಲಿ ತೊಡಗುತ್ತದೆ. ಈಗ ಆಕೆ ತನ್ನನ್ನು ಹೊಸದಾಗಿ ವ್ಯಾಖ್ಯಾನಿಸಿಕೊಳ್ಳುತ್ತಾಳೆ. ಹಿಂಸಾತ್ಮಕಳಾಗುತ್ತಾಳೆ, ತನ್ನ ಸ್ತ್ರೀತ್ವವನ್ನು ಕಳೆದುಕೊಳ್ಳುತ್ತಾಳೆ. ಅವಳು ಅನುಭವಿಸುವ ಶಕ್ತಿ ಸೃಷ್ಟಿಕರ್ತನದು. ಈ ಹಂತದಲ್ಲಿಯೇ ಸೃಜನಶೀಲತೆ ಹುಟ್ಟಿಕೊಂಡು ಸ್ತ್ರೀತ್ವ ನಾಶವಾಗುವ ವೈರುಧ್ಯದ ಸಂಗತಿಗಳು ನಡೆಯುತ್ತವೆ.

ಇಲ್ಲಿ ಆಕೆ ಒಂದು ತುಂಬಿಸಿಟ್ಟ ಬಂದೂಕು. ಒಡೆಯ ಇಲ್ಲದೇ ಒಡೆತನ ಸ್ಥಾಪಿಸುವವರಿಲ್ಲದೇ ಅವಳೊಬ್ಬ ಆಯುಧ ಮಾತ್ರ. ಈ ಪದ್ಯದಲ್ಲಿ ಎರಡು ಚಿತ್ರಗಳು ಕಂಡುಬರುತ್ತವೆ. ಒಂದು ಚಿತ್ರ ಮಾತನಾಡುವವಳು, ಇನ್ನೊಂದು ಚಿತ್ರ ಆಕೆಯ ಒಡೆಯನದು. ಇಲ್ಲಿ ಇನ್ನೊಂದು ವ್ಯಕ್ತಿ ಬೇರೆ ಯಾರೂ ಆಗಿರದೇ ಅವಳ ವ್ಯಕ್ತಿತ್ವದ ಇನ್ನೊಂದು ಮುಖ. 'ಅವನು' ಎನ್ನುವುದು ಒಂದು ಪ್ರತಿಮೆ ಅಥವಾ ಸಂಕೇತ. ಅವಳ ವ್ಯಕ್ತಿತ್ವದ ಚೇತನದ ಕ್ರಿಯಾಶೀಲತೆಯ, ಇಚ್ಛಾಶಕ್ತಿಯ ಸಂಕೇತ. ಆಕೆಯಿದ್ದ ಬದುಕಿದ್ದ ಸಾಂಸ್ಕೃತಿಕ ಘಟ್ಟದಲ್ಲಿ ಎಮಿಲಿ ಇವೆಲ್ಲವನ್ನೂ ಗಂಡಸಿನ ಚಿತ್ರದೊಂದಿಗೆ ಸಮೀಕರಿಸಿ ಗುರುತಿಸಿಕೊಳ್ಳಲು ಪ್ರಯತ್ನಿಸಿದ್ದಾಳೆ. ಆಕೆ ಬದುಕಿದ್ದ ಪಿತೃಪ್ರಧಾನ ಸಮಾಜ ಧಾರ್ಮಿಕ, ಸಾಂಸ್ಕೃತಿಕ ಘಟ್ಟದಲ್ಲಿ ಹೀಗೆ ಪುರುಷನ ರೂಪದೊಂದಿಗೆ ಗುರುತಿಸಿಕೊಳ್ಳುವುದು ಎಮಿಲಿ ಡಿಕಿನ್‌ಸನ್‌ಗೆ ಸಹಜ ಎನಿಸಿರಬೇಕು.

ಮಾನಸಿಕ ಶಾಸ್ತ್ರಜ್ಞ ಕಾರ್ಲ ಯುಂಗ್ ಇದನ್ನು ಹೆಂಗಸಿನ ಮಾನಸಿಕತೆಯಲ್ಲಿರುವ ಗಂಡಸಿನ ವ್ಯಕ್ತಿತ್ವದ ಪ್ರತಿಬಿಂಬ ಎಂದು ಕರೆಯುತ್ತಾನೆ. ಗಂಡು ಅಥವಾ ಹೆಣ್ಣಿನಲ್ಲಿ ಗಂಡುತನದ ಹೆಣ್ಣುತನದ ಅಂಶಗಳ ಅಸ್ತಿತ್ವ ಮಾನಸಿಕ ಮಟ್ಟದಲ್ಲಿ ಇರುತ್ತದೆ. ಅಂದರೆ ಒಂದು ವ್ಯಕ್ತಿತ್ವದೊಳಗಡೆ ಇರುವ ಇನ್ನೊಂದು ಮುಖದ ಆವಾಹನೆಗಾಗಿ–ಅವೆರಡನ್ನೂ ಒಂದುಗೂಡಿಸಿ ಪೂರ್ಣತ್ವ ಸಾಧಿಸುವ ಹಂತದಲ್ಲಿ ವ್ಯಕ್ತಿತ್ವದ ಎರಡು ಮುಖದ ಅನುಭವಗಳು ತಾಕಲಾಟಕ್ಕೆ ತೊಡಗಿಕೊಳ್ಳುತ್ತವೆ. ಇಂತಹ ದ್ವಂದ್ವವನ್ನು ಆಕೆಯ ಆತನ ಸಂಬಂಧದಲ್ಲಿ ಲೈಂಗಿಕತೆ-ಪ್ರಕೃತಿಯ ಸಂಬಂಧದಲ್ಲಿ, ಆಕೆಯ–ಆಧ್ಯಾತ್ಮಿಕತೆಯ ಸಂಬಂಧದಲ್ಲಿ ನೋಡಬಹುದು. ಈ ರೀತಿಯ ಪುರುಷ ಸ್ತ್ರೀ ವ್ಯಕ್ತಿತ್ವಗಳು ಕನಸಿನಲ್ಲಿ, ಮಿಥ್‌ಗಳಲ್ಲಿ, ಕಲೆಯಲ್ಲಿ ಮಾನವನಾಗಿ ದೈವತ್ವವಾಗಿ, ಪ್ರಿಯನಾಗಿ

---

19ನೆಯ ಶತಮಾನದ ಮಧ್ಯಭಾಗದಲ್ಲಿ ಸ್ತ್ರೀಯರಿಗೆ ಕಾವ್ಯ ಮಾಧ್ಯಮ ಸರಿಯಲ್ಲ ಎಂದು ತೀರ್ಮಾನಿಸ ಲಾಗಿತ್ತು. ಅದು ಅವರಿಗೆ ಅಪಾಯದ ಹಾದಿ ಎಂದು ಎಣಿಸಲಾಗಿತ್ತು. ಕೆಳಗಿನ ಸಾಲುಗಳಲ್ಲಿ ಎಮಿಲಿ ತನ್ನ ನೋವನ್ನು ತೋಡಿಕೊಂಡಿದ್ದಾಳೆ.

ಅವರು ನನ್ನನ್ನು ಗದ್ಯದಲ್ಲಿ ಕೂಡಿಹಾಕಿದರು
—ನಾನು ಚಿಕ್ಕ ಹುಡುಗಿಯಾಗಿರುವಾಗ
ನನ್ನನ್ನು ಚಿಕ್ಕ ಕೋಣೆಯೊಳಗೆ ಬಂಧಿಸಿಟ್ಟ ಹಾಗೆ
ಏಕೆಂದರೆ ಅವರು ನನ್ನನ್ನು ಚಲನರಹಿತಳನ್ನಾಗಿಯೇ
ಇಷ್ಟಪಟ್ಟಿದ್ದರು.

> ಚಾರಲೆಟ್ ಬ್ರಾಂಟೆ 1837 ರಲ್ಲಿ ತನ್ನ ಕೆಲವು ಪದ್ಯಗಳನ್ನು ಕವಿ ಲೌರಿಯೇಟ್, ರಾಬರ್ಟ್ ಸೌಧಿಗೆ ಕಳಿಸಿದ್ದಳು. ಆತ ಆಕೆಗೆ ಹೇಳಿದ್ದು : 'ಸಾಹಿತ್ಯ ಹೆಂಗಸರ ಬದುಕಿನ ವ್ಯವಹಾರವಾಗುವುದು ಸಾಧ್ಯವಿಲ್ಲ ಮತ್ತು ಅದು ಆಗಬಾರದು'

ದೇವರಾಗಿ ಕಾಣಿಸಿಕೊಳ್ಳಬಹುದು. ಹಾಗೆಯೇ ಡಿಕಿನ್‌ಸನಳ ಆಂತರಿಕ ಚೈತನ್ಯದ ಚಿಲುಮೆಯು ಇನ್ನೊಂದು ಮುಖ ಒಡೆಯನಾಗಿ ಕಾಣಿಸಿಕೊಳ್ಳುತ್ತಾನೆ.

ಡಿಕಿನ್‌ಸನ್ ತನ್ನೊಳಗಿನ ಪುರುಷ ಶಕ್ತಿಯೊಂದಿಗೆ ಸಾಮರಸ್ಯ ಸಾಧಿಸಲು ಇಲ್ಲಿ ಪ್ರಯತ್ನಿಸುವುದಿಲ್ಲ. ಅದು ಅಪಾಯಕಾರಿ ಹಾದಿ. ಆ ಶಕ್ತಿಯು ಆಕೆಯ ಬದುಕಿನಲ್ಲಿ ಅವಾಹನೆಯಾಗುವವರೆಗೆ ಆಕೆಯ ಬದುಕು ಆತಂಕಕಾರಿಯಾಗಿತ್ತು, ಮೂಲೆ ಗುಂಪಾಗಿಸಲ್ಪಟ್ಟಿತ್ತು, ಗೋಡೆಯೊಳಗೆ ಬಂಧಿಸಲ್ಪಟ್ಟಿತು. ಅವಳ ಆಂತರಿಕ ಚೇತನ, ಶಕ್ತಿ ಬಿಡುಗಡೆಯಾಗುವುದೇ ಒಡೆಯ ಆಕೆಯನ್ನು ಹೊತ್ತುಕೊಂಡು ಹೋಗುವುದರಿಂದ.ಅವಳು ತನ್ನಸ್ತ್ರೀತ್ವವನ್ನು ಬಿಟ್ಟುಕೊಟ್ಟು ತನ್ನೊಳಗಿನ ಗಂಡುತನಕ್ಕೆ ಶರಣಾಗುವುದರಿಂದ ಆಕೆ ಅಪಾಯಕಾರಿ ಆಯುಧವಾಗಿ ಬದಲಾವಣೆ ಹೊಂದುತ್ತಾಳೆ. ಹೀಗೆ ಎಮಿಲಿ ಡಿಕಿನ್‌ಸನ್ ತನ್ನೊಳಗಿನ ಗಂಡುತನದ ಶಕ್ತಿಯ ಆವಾಹನೆಗಾಗಿ ತನ್ನ ಸ್ತ್ರೀತ್ವವನ್ನು ಬಲಿಕೊಡುತ್ತಾಳೆ. ಅಮೇರಿಕನ್ ಸಂಸ್ಕೃತಿಯಲ್ಲಿ 'ನಾಯಕ'ನ ವಿಜೃಂಭಣೆ ಜಾಸ್ತಿ. ಇಂತಹ ಸಂಸ್ಕೃತಿಯಲ್ಲಿ ಬರೆದ ಡಿಕಿನ್‌ಸನ್‌ಳ ಒಳ ಅಂತರಂಗ ಅವಳನ್ನು ಒಬ್ಬ ಬೇಟೆಗಾರ್ತಿಯನ್ನಾಗಿ, ಕಾಡು ಮನುಷ್ಯಳನ್ನಾಗಿ ಮಾಡುತ್ತದೆ. ಇದು ಸ್ತ್ರೀಯ ಮನಸ್ಸಿನೊಳಗಿನ ನಿಗೂಢತೆ. ಅಪ್ರಜ್ಞಾವಸ್ಥೆಯಲ್ಲಿನ ನಿಗೂಢತೆ. ದೇವರ ಹಾಗೂ ಹೆಣ್ಣಿನ ಸಂಬಂಧದಲ್ಲಿ ಪುರುಷನಿಗೆ ಗಂಡುತನ ಎನ್ನುವುದು ಅವಶ್ಯಕವಾಗುತ್ತದೆ. ಈ ಸಂಬಂಧ ನಂಟುತನಕ್ಕೆ, ಮಿಲನಕ್ಕೆ ದಾರಿಮಾಡಿಕೊಡುತ್ತದೆ. ಈ ತರಹೆಯ ಮಿಲನ ಸ್ಪರ್ಧಾತ್ಮಕವಾಗಿರುತ್ತದೆ. ಉದ್ದೇಶ ಮತ್ತು ಘರ್ಷಣೆ ನಡೆಯುತ್ತದೆ. ಪ್ರಕೃತಿಯನ್ನು ತನ್ನ ದೈಹಿಕ ಹಾಗೂ ಆಧ್ಯಾತ್ಮಿಕ ಅವಶ್ಯಕತೆಗಳಿಗಾಗಿ ಬಳಸಿಕೊಳ್ಳುವ ಪುರುಷ ಅದನ್ನು ತನ್ನದಾಗಿಸಿಕೊಳ್ಳುವ ಹಾಗೂ ಪಳಗಿಸುವ ಪ್ರಕ್ರಿಯೆಯತ್ತ ಸರಿಯುತ್ತಾನೆ. ಪ್ರಕೃತಿಯು ತನ್ನ ಗುರಿಗಳನ್ನು ಸಾಧಿಸಲು ಇಚ್ಛಿಸುವಂತೆ ಮಾಡುತ್ತಾನೆ. ಪ್ರಕೃತಿಯ ದೃಷ್ಟಿಯಿಂದ, ಸ್ತ್ರೀತ್ವದ ದೃಷ್ಟಿಯಿಂದ ಈ 'ಶೂರತನ' ಎನ್ನುವ ಮಿಥ್ ದುಃಖಾಂತದ ಹಾಗೂ ಅಪಾಯದ ಶಕ್ತಿಯನ್ನು ಹೊಂದಿರುತ್ತದೆ.

ಈ ಪದ್ಯದ ಹೋರಾಟ ಶೂರತನದ ಹೋರಾಟ. ಸ್ತ್ರೀತ್ವವನ್ನು ವಶಪಡಿಸಿಕೊಳ್ಳುವ ಹಂತದಲ್ಲಿ ನಾಯಕ ತನ್ನ ಅಸ್ತಿತ್ವದೊಂದಿಗೆ ಹೋರಾಡುತ್ತಾನೆ. ಭೂಮಿಯ ವಿರುದ್ಧ ಹೋರಾಟ ನಡೆಸುವ ಹಂತದಲ್ಲಿ ತನ್ನ ಅಸ್ತಿತ್ವದ 'ಅಹಂ'ನ್ನು ಕಾಪಾಡಿಕೊಳ್ಳುತ್ತಾನೆ. ಈ ಶೂರ ಕಾಡಿನೊಳಗೆ ತನ್ನ ಇನ್ನೊಂದು ಆತ್ಮ ಕಂಡು ಹಿಡಿಯಲು ಬರುವುದು. ತನ್ನ ಅಸ್ತಿತ್ವದ ಅಹಂನ ಸ್ಥಾಪನೆಗೋಸ್ಕರ ಸ್ತ್ರೀತ್ವದ ಶಕ್ತಿಯನ್ನೇ ತನ್ನದಾಗಿಸಿಕೊಂಡು ಬಿಡುತ್ತಾನೆ. ತನ್ನ ಕೈಯಲ್ಲಿನ ಆಯುಧದಿಂದ, ತನ್ನ ಬೌದ್ಧಿಕತೆ ಹಾಗೂ ಇಚ್ಛಾಶಕ್ತಿಯನ್ನು ಆಯುಧಗಳನ್ನಾಗಿ ಮಾಡಿಕೊಂಡು ತನ್ನ ಆತ್ಮ ರಕ್ಷಣೆಗೆ ಬಳಸಿಕೊಳ್ಳುತ್ತಾನೆ. ಅವನೀಗ ಪ್ರಿಯತಮ ಅಥವಾ ಹುಡುಕಾಟದ ವ್ಯಕ್ತಿಯಲ್ಲ, ಬದಲು ಒಬ್ಬ ಹಿಂಸಾಚಾರಿ, ಕೊಲೆಗಾರ, ಅತ್ಯಾಚಾರಿ.

ಇಲ್ಲಿ ಎಮಿಲಿ ನಾಯಕನ ಜೊತೆ ತನ್ನನ್ನು ಗುರುತಿಸಿಕೊಳ್ಳುತ್ತಾಳೆ. ಹೆಣ್ಣು ಜಿಂಕೆಯನ್ನು ಆಕೆ ಹಾಗೂ ಅವನು ಸೇರಿ ಬೇಟೆಯಾಡುತ್ತಾರೆ. ಹೀಗೆ ಕಾಡು ಮನುಷ್ಯನೊಂದಿಗೆ ಗುರುತಿಸಿಕೊಳ್ಳುವುದಕೋಸ್ಕರ ಆಕೆಯ ಸ್ತ್ರೀತ್ವವನ್ನು ಬಲಿಕೊಡಬೇಕಾದ ಅಗತ್ಯ ಆಕೆಗೆ ಒದಗಿ ಬರುತ್ತದೆ. ಅಂದರೆ ಆಕೆಯ ಲೈಂಗಿಕ ಹಾಗೂ ತಾಯ್ತನದ ಬಲಿ.

ಜಿಂಕೆಯನ್ನು ಕೊಲೆ ಮಾಡುವಲ್ಲಿ ಎಮಿಲಿ ಯಾವ ಕರುಣೆ, ಹಿಂಜರಿಕೆ, ಇಲ್ಲದೇ ಕೈ ಸೇರಿಸುತ್ತಾಳೆ. ಆಕೆಗೆ ಅವಳೊಳಗಿನ ಮನಸ್ಸಿನ ಇಚ್ಛಾಶಕ್ತಿ ಹಾಗೂ ಬೌದ್ಧಿಕತೆಯ ಅರಿವಾಗಬೇಕಿದೆ. ಕಾಡು ಮನುಷ್ಯನೊಂದಿಗೆ ಸೇರಿಕೊಳ್ಳುವುದರಿಂದ ಇದು ಆಕೆಗೆ ಸಾಧ್ಯವಾಗುತ್ತದೆ. ಅಂದರೆ ಗಂಡುತನದ ಶಕ್ತಿಯ ಮಿಲನದಿಂದಾಗಿ ಎಮಿಲಿಯಲ್ಲಿನ ಕಲೆಗಾರಿಕೆಯ ಸೃಜನಶೀಲತೆ ಬಿಚ್ಚಿಕೊಳ್ಳುತ್ತದೆ. ಅವನ ಪ್ರೇರಣೆ, ಕುಶಲತೆಯಿಂದಾಗಿ ಆಕೆ ಕವಿಯಿತ್ರಿಯಾಗುತ್ತಾಳೆ. 'ಶಕ್ತಿ' ಎನ್ನುವುದು ಇಲ್ಲಿ 'ಕಲೆ'ಯಾಗಬಹುದು.

ಕವಿಯ ಚಿಂತನೆಯಲ್ಲಿನ ಗಂಡುತನದ ಮೂಲಕ ಆತನಿಗೆ ಕಾವ್ಯದಲ್ಲಿ ದೈವತ್ವದ ಪ್ರೇರಣೆಯಾಗುವಂತೆ, ಈ ಪದ್ಯದಲ್ಲಿ ಗಂಡುತನದ ಆವಾಹನೆಯ ಮೂಲಕ ಎಮಿಲಿಯಲ್ಲಿ

ಸೃಜನಶಕ್ತಿಯ ಬಿಡುಗಡೆಯಾಗುತ್ತದೆ. ಆದರೆ ಈ ಸೃಜನ ಶೀಲತೆ ನಾಶಮಾಡುವಂತಹದು. ಡಿಕಿನ್‌ಸನ್ ಕಲಾವಿದೆ ಯಾಗುವುದಕ್ಕೋಸ್ಕರ ಬದುಕಿನ ಎಲ್ಲಾ ಅಂಶಗಳನ್ನೂ ತ್ಯಜಿಸಬೇಕಾದ ಆಯ್ಕೆ ಆಕೆಯದಾಗಿತ್ತು. ಪ್ರೇಯಸಿ, ಪತ್ನಿ, ತಾಯಿ ಇಂತಹ ಬದುಕಿನ ಮುಖಗಳಿಗೆ ತಿಲಾಂಜಲಿ ಇತ್ತು, ಆಕೆ ಕಾವ್ಯ ಪ್ರಪಂಚಕ್ಕೆ ತನ್ನನ್ನು ಅರ್ಪಿಸಿಕೊಳ್ಳ ಬೇಕಾಗಿತ್ತು. ಹಾಗಾಗಿ ಸ್ತ್ರೀತ್ವದ ಬಗ್ಗೆಗಿನ ಆಕೆಗಿದ್ದ ವಿರೋಧ ಧೋರಣೆ ಇಲ್ಲಿ ಕಂಡುಬರುತ್ತದೆ.

ಜಿಂಕೆಯ ರಕ್ತ ಸುರಿಸಿದ ಮೇಲೆ ಆಕೆ ರಾತ್ರಿ ಅಲ್ಲಿಯೇ ಉಳಿಯುತ್ತಾಳೆ. ಒಡೆಯನ ತಲೆ ಕಾಯುತ್ತಾಳೆ. ಆದರೆ ಒಡೆಯನ ಹಾಸಿಗೆಗೆ ಹೋಗುವುದಿಲ್ಲ. ಆಕೆ ಐಡರ್-ಬಾತುಕೋಳಿಯಾಗುವುದಕ್ಕೆ ಇಷ್ಟಪಡುವುದಿಲ್ಲ. ಐಡರ್-ಬಾತುಕೋಳಿ ಕೆಳದರ್ಜೆಯದೆಂದು ಪರಿಗಣಿತವಾಗಿರುವುದು ಮಾತ್ರವಲ್ಲ, ಅದು ಗೂಡು ಕಟ್ಟುವುದು ತನ್ನದೇ ಪುಕ್ಕ ಗಳನ್ನು ಕಿತ್ತುಕೊಳ್ಳುವುದರ ಮೂಲಕ. ಐಡರ್-ಬಾತು ಕೋಳಿ ಇಷ್ಟಪಡದ ಡಿಕಿನ್‌ಸನ್ ಸಾಂಪ್ರದಾಯಿಕ ಕಾವ್ಯ ಹಾಗೂ ಕೌಟುಂಬಿಕ ಪಾತ್ರವನ್ನು ತಿರಸ್ಕರಿಸುವುದನ್ನು ಕಾಣಬಹುದು. ಹಾಗೆಯೇ ಸ್ತ್ರೀ ತನಗೆ ತಾನೇ ಹಿಂಸೆ ಮಾಡಿಕೊಳ್ಳುವ ಗುಣವನ್ನು ತಿರಸ್ಕರಿಸುತ್ತಾಳೆ.

ಪದ್ಯದ ಕೊನೆಯ ಭಾಗದಲ್ಲಿ ಒಗಟು ಇದೆ. ಕಲೆಗಾರಿಕೆ ಜೀವಂತ ಸಾವಿನಲ್ಲಿ ಪರಿಪೂರ್ಣವಾಗುವ ಒಗಟು ಅದು. ಆಕೆ ಹೆಚ್ಚು ಕಾಲ ಬದುಕುತ್ತಾಳೆ. ಆದರೆ ಆಕೆಗಿಂತ ಆತ ಹೆಚ್ಚು ಬದುಕಬೇಕೆಂದು ಆಕೆ ಅಪೇಕ್ಷಿಸುತ್ತಾಳೆ. ಆಕೆ ತನ್ನ ಸೃಜನಶೀಲ ಗಂಡುತನದ ಕೈಗೊಂಬೆ. ಎರಡು ಕಾರಣಗಳಲ್ಲಿ ಇದನ್ನು ನೋಡಬಹುದು. 1) ಆಕೆಯ ಭೌತಿಕ ಬದುಕು ತುಂಬಿಸಿಟ್ಟ ಬಂದೂಕಿನ ತರಹ. ಎರಡನೆಯದು ಗಂಡು ತನದ ಸೆಲೆಯಿಂದ ಉಂಟಾದ ಸ್ಫೂರ್ತಿ ಎಲ್ಲವನ್ನೂ ನಿರ್ಧರಿಸುತ್ತದೆ. ಆಕೆಯ ಲೌಕಿಕ ಬದುಕನ್ನು ಆತ ಬದಲಾಯಿಸುವವನು. ಅವನು ಆಕೆಗೆ ಮಾದರಿ ಚಿತ್ರ ವಾಗಿ ಸ್ಫೂರ್ತಿಯಾಗುತ್ತಾನೆ. ಈ ಗಂಡುತನ ಶಾಶ್ವತ ವಾಗಿರಲೆಂದು ಆಕೆ ಬಯಸುತ್ತಾಳೆ.

ಕೊನೆಯ ಸಾಲುಗಳಲ್ಲಿ ಬರುವ ಸಾಯುವ-ಕೊಲ್ಲುವ ಶಕ್ತಿ ದ್ವಂದ್ವಾರ್ಥಗಳಿಂದ ಕೂಡಿದೆ. ಸಾಯುವ ಶಕ್ತಿಯ ಒಗಟು ಕಲೆಗಾರ್ತಿಯ ಕೊಲ್ಲುವ ಶಕ್ತಿಯಲ್ಲಿ ಬಿಡಿಸ ಲ್ಪಟ್ಟಿದೆ. ಆಕೆ ಸಾಯುವುದು ಕಲೆಗಾರಿಕೆಯ ಸಮ್ಮೋಹಕ ಶಕ್ತಿಯಲ್ಲಿ, ಗಂಡುತನದ ಆಕೆಯ ಶಕ್ತಿ ಸಾಯುವ ಕ್ಷಣ ಗಳನ್ನು ನಿಗದಿಗೊಳಿಸುತ್ತಿದೆ. ಆದರೆ ಆಕೆಯ ಮನುಷ್ಯ ಸಾಮರ್ಥ್ಯಗಳು ಭಾಷೆಯ ಜೊತೆ ಆಕೆ ಕಸಿ ಮಾಡುವುದು, ಸಂಕೇತಗಳಲ್ಲಿ ಆಶೆಯ ಮೂಡಿಸುವ–ಇತ್ಯಾದಿ ಕೆಲಸಗಳು ಆ ನಿಗದಿತ ಸಮಯವನ್ನು ಪುಟಗಳ ಮೇಲೆ ಮೂಡಿಸು ತ್ತವೆ. ಕಲೆಗಾರಿಕೆಯ ಕೆಲಸ ಬರಿಯ ನಾಶಗೊಳಿಸುವಿಕೆ ಅಲ್ಲ, ಕೊನೆಯಲ್ಲಿ ಅದು ಆತ್ಮ ಸೃಜನಶೀಲತೆಯನ್ನು ಒಳಗೊಂಡಿರುತ್ತದೆ. ಈ ಪದ್ಯದ ಕೊನೆಯ ಸಾಲು ನಿಗೂಢ ರೀತಿಯಲ್ಲಿ ಕಲೆಗಾರ್ತಿಯ ಕಲೆಗಾರಿಕೆ, ಕಸುರಿ ಕೆಲಸ, ಇವು ಬದುಕುವ ಸಾಯುವ, ಕ್ಷಣಗಳನ್ನು ಮೀರಿದ್ದು ಎಂದು ಎಮಿಲಿ ತೋರಿಸುತ್ತಾಳೆ.

ಗಂಡುತನದ ಆವಾಹನೆಯ ನಂತರ ಆಕೆ ಪರಿಪೂರ್ಣತೆಗೆ ತಡಕಾಡುತ್ತಾಳೆ. ಅವನ 'ಬೌದ್ಧಿಕತೆ'–'ಇಚ್ಛಾಶಕ್ತಿ' ಆಕೆಯ ಪ್ರಜ್ಞೆಯಲ್ಲಿ ಅಚ್ಚೊತ್ತಿವೆ. ಆಕೆ ಪುರುಷತ್ವದ ಪರಿಪೂರ್ಣತೆಗೆ ಅಲ್ಲ, ಆಕೆಯ ಸ್ತ್ರೀತ್ವದ ಪರಿಪೂರ್ಣತೆಗೆ ಪ್ರಯತ್ನಿಸುತ್ತಾಳೆ. ಕವಯಿತ್ರಿಯ ಬದುಕು, ನಿಲುವು ಆಕೆಯನ್ನು ಕಲೆಗಾರ್ತಿಯನ್ನಾಗಿಸುತ್ತದೆ. ಗಂಡುತನದ ಆವಾಹನೆಗೊಳಗಾಗಲ್ಪಟ್ಟ ಈಕೆ ಈಗ ಅನುಭವವನ್ನು ಕೊಂದು ತನ್ನನ್ನು ಕೂಡಾ ಕಲೆಯಲ್ಲಿ ಕೊಂದುಕೊಳ್ಳು ತ್ತಾಳೆ. ಕಲೆಯಲ್ಲಿ ಅಮರತ್ವ ಸಾಧಿಸುವ ಈಕೆ, ಬದುಕಿನಲ್ಲಿ ನಶ್ವರತೆಯ ಅನುಭವಿಸುವ ಈಕೆ ಕವನದಲ್ಲಿ ಕಾಲಾತೀ ಳಾಗುತ್ತಾಳೆ.

ಡಿಕಿನ್‌ಸನ್ ಜೀವಂತಿಕೆಯಿಂದ ಬದುಕಿದ್ದು ಆಕೆಯ ಮಾನಸಿಕ ಜಗತ್ತಿನಲ್ಲಿ. ಪುರುಷರ ಜಗತ್ತಿನಿಂದ ಕೌಟುಂಬಿಕ ಚೌಕಟ್ಟಿನಿಂದ ಹೊರಗಿದ್ದ ಈಕೆ ಭಾವನಾ ತರಂಗಗಳ ಉತ್ತುಂಗದಲ್ಲಿ ಬದುಕಿದ್ದವಳು. ಕೊನೆಯ ಉಸಿರಿನವರೆಗೆ ಬದುಕಿನ ಶೋಧನೆಯ ಹಂತದಲ್ಲಿಯೇ ಕಾಲ ಕಳೆದ ಡಿಕಿನ್‌ಸನ್‌ಳ ಮಹತ್ವ ಅಡಗಿರುವುದೂ ಅಲ್ಲಿಯೇ.

> 19ನೆಯ ಶತಮಾನದಲ್ಲಿ ಕಾವ್ಯ ಮಾಧ್ಯಮ ಹೆಂಗಸಿಗೆ ಅಪಾಯಕಾರಿ ಹಾದಿ ಎಂದು ಪರಿಗಣಿಸಲಾಗಿತ್ತು. ಇಂತಹ ಸಂದರ್ಭದಲ್ಲಿ ಕೋಣೆಯೊಂದರಲ್ಲಿ ಕುಳಿತೂ ಸ್ವಾತಂತ್ರ್ಯ ಅನುಭವಿಸಿ ಕಾವ್ಯದ ಹಾದಿಯನ್ನೇ ಆಯ್ದುಕೊಂಡ ಎಮಿಲಿ ಡಿಕಿನಸನ್ ಈಗಿನ ಕವಯಿತ್ರಿಯರಾದ ಸಿಲ್ವಿಯಾ ಪ್ಲಾಟ್, ಆಡ್ರಿಯೆನ್ ರಿಚ್‌ರಂತಹ ಕವಯಿತ್ರಿಯರಿಗೆ ಸ್ಫೂರ್ತಿಯ ಸೆಲೆಯಾಗಿದ್ದಾಳೆ.

ಇಲ್ಲಿನ ಪದ್ಯ ಎಮಿಲಿಯ ಕೇಂದ್ರ ಪದ್ಯ. ಎಮಿಲಿ ಡಿಕಿನ್‌ಸನ್‌ಳನ್ನು ಅರ್ಥಮಾಡಿಕೊಳ್ಳುವಲ್ಲಿ ನಮ್ಮನ್ನು ಅರ್ಥಮಾಡಿಕೊಳ್ಳುವಲ್ಲಿ,19ನೆಯ ಶತಮಾನದ ಕಲೆಗಾರ್ತಿಯರ ಸಾಧನೆ ಅರ್ಥಮಾಡಿಕೊಳ್ಳುವಲ್ಲಿ ಇದು ಮಹತ್ವದ ಪದ್ಯ.

ಈ ಪದ್ಯ ಸರಿಯಾಗಿ ವ್ಯಾಖ್ಯಾನಿಸಿದ್ದೇನೆಂಬ ಅಥವಾ ವ್ಯಾಖ್ಯಾನಿಸಿದ್ದನ್ನು ಅರ್ಥಮಾಡಿಕೊಂಡಿದ್ದೇನೆಂಬ ಭರವಸೆ ನನಗಿಲ್ಲ. ಆದರೂ ಆಕೆಯನ್ನು ಅರ್ಥಮಾಡಿಕೊಳ್ಳುವಲ್ಲಿ ಇದು ಒಂದು ಚಿಕ್ಕ ಪ್ರಯತ್ನ ಮಾತ್ರ.

**ಎಚ್. ಎಸ್. ಚಂಪಾವತಿ**

---

ಆಧಾರ : 1) Vesuvius at Home ; The power of emily Dickinson ;

*— by Adrienne Rich*

2) Emily Dickinson and the Deerslayer ; The dilemma of the woman poet in America.

*— by Albeit Gelpi*

From Shakespear Sisters, Edited by :

*— Sandram Gilbert, & Susan Subar*

REGD. NO. KRNA 271

## ಶಾಂತಿ, ಪ್ರೇಮ, ಸಹನೆ-ಸಹಬಾಳ್ವೆ ಇದು ನಮ್ಮ ಮತವಾಗಲಿ

- ದ್ವೇಷವನ್ನು ವಿರೋಧಿಸಿ, ಮತೀಯ ಅಂಧಾಭಿಮಾನವನ್ನು ದೂರ ಮಾಡಿ, ಮತಭ್ರಾಂತಿಯನ್ನು ತಿರಸರ್ಕಿಸಿ ನಮ್ಮ ರಾಷ್ಟ್ರದ ಸಂದ ಜಾತ್ಯಾತೀತ ಹಂದರವನ್ನು ವಿಚ್ಛಿದ್ರಕಾರಕ ಶಕ್ತಿಗಳು ಹಾಳು ಮಾಡಲು ಎಡೆಗೊಡಬೇಡಿ.

  ಭಾರತದ ಒಗ್ಗಟ್ಟು ಹಾಳಾದರೆ, ರಾಷ್ಟ್ರಶಕ್ತಿ ಕುಂದುತ್ತದೆ. ಭಾರತ ಅಶಕ್ತವಾಗಲು ನಾವೆಂದಿಗೂ ಅವಕಾಶ ನೀಡಬಾರದು.

- ಶತ ಶತಮಾನಗಳಿಂದ ಭಾರತದ ಪವಿತ್ರ ನೆಲದಲ್ಲಿ ವಿವಿಧ ಜನಾಂಗ, ಜಾತಿ, ಸಂಸ್ಕೃತಿಗಳು ಒಟ್ಟಿಗೆ ಅರಳಿವೆ; ಬಾಳಿ ಬದುಕಿವೆ. ರಾಷ್ಟ್ರದ ಸಮಗ್ರ ಪ್ರಗತಿಗೆ ತಮ್ಮ ಕೊಡುಗೆಯನ್ನು ನೀಡಿ, ದೇಶಕ್ಕೆ ವಿಶ್ವದಲ್ಲಿಯೇ ಸರಿಸಾಟಿಯಿಲ್ಲದ ಅದ್ವಿತೀಯ ಸ್ಥಾನವನ್ನು ಗಳಿಸಿಕೊಟ್ಟಿವೆ.

- ನಮ್ಮ ರಾಷ್ಟ್ರದ ಜಾತ್ಯಾತೀತ ತಳಹದಿ ಅಭದ್ರವಾಗುತ್ತಿದೆ.

- ಮತೀಯ ದ್ವೇಷಾಸೂಯೆಗಳಿಂದ ನಮ್ಮ ಪ್ರಗತಿ ಕುಂಠಿತವಾಗಿ ಆರ್ಥಿಕ ವಿಕಾಸ ಅಸ್ತವ್ಯಸ್ತವಾಗುವುದಕ್ಕೆ ಅವಕಾಶ ಮಾಡಿಕೊಡುವುದು ಸರಿಯೇ ? ವಿಮರ್ಶಿಸಿ ನೋಡಿ.

- ನಮ್ಮ ರಾಜ್ಯಾಂಗದಲ್ಲಿ ಅಳವಡಿಸಿರುವ ಪವಿತ್ರವಾದ ಜಾತ್ಯಾತೀತ ಆದೇಶಗಳಿಗೆ ಕಳಂಕ ತರುವುದು ನ್ಯಾಯವೇ ? ವಿಚಾರ ಮಾಡಿ.

- ರಾಷ್ಟ್ರದ ಶಾಂತಿ ಮತ್ತು ಪ್ರಗತಿಗಾಗಿ ಒಮ್ಮತದಿಂದ ಒಂದುಗೂಡಿ ಕೋಮು ಸೌಹಾರ್ದದ ಕಾರ್ಯಕ್ರಮಗಳಲ್ಲಿ ಭಾಗವಹಿಸಿ.

- ಮತೀಯ ಮನೋವಿಕಾರಗಳನ್ನು ಕಿತ್ತೊಗೆದು, ಒಗ್ಗಟ್ಟು—ಒಮ್ಮನಸ್ಸಿನಿಂದ ತಲೆ ಎತ್ತಿ ನಿಲ್ಲೋಣ. "ವಿಶ್ವದ ಎಲ್ಲ ರಾಷ್ಟ್ರಗಳ, ಎಲ್ಲ ಜನಾಂಗಗಳ ತಿರಸ್ಕೃತಗೊಂಡವರಿಗೆ ಮತ್ತು ನಿರಾಶ್ರಿತರಿಗೆ ಆಶ್ರಯ ನೀಡಿದ ಪವಿತ್ರ ರಾಷ್ಟ್ರ ನನ್ನದೆಂಬ ಹೆಮ್ಮೆ ಮತ್ತು ಅಭಿಮತ ನನ್ನದು"—ಎಂಬ ಸ್ವಾಮಿ ವಿವೇಕಾನಂದರ ವಾಕ್ಯವನ್ನು ನಾವೆಲ್ಲರೂ ಪುನರುಚ್ಚರಿಸೋಣ.

—ಕರ್ನಾಟಕ ವಾರ್ತೆ